# ಪುಷ್ಪಹಾರ

(ಕಾದಂಬರಿ)



ಶ್ರೀಮತಿ
ಜಯಲಕ್ಷ್ಮಿ ಆರ್. ಶ್ರೀನಿವಾಸನ್



ಕುಸುಮ ೪.

# ಶಿಕ್ಷಕರಿಗೆ ಸೂಚನೆಗಳು.

ವ್ಯಾಕರಣವನ್ನು ಕಲಿಸುವುದರ ಉದ್ದೇಶ್ಯಗಳನ್ನು ಶಿಕ್ಷಕರು ಬಲ್ಲರು. ಆ ಉದ್ದೇಶ್ಯಗಳನ್ನು ಈಡೇರಿಸುವುದಕ್ಕಾಗಿ ಕಲಿಸುವವರು ಕೆಳಗಿನ ಸೂಚನೆಗಳನ್ನು ಅನುಲಕ್ಷಿಸಬಹುದು.

(೧) ವ್ಯಾಕರಣವನ್ನು ಕಲಿಸುವುದಕ್ಕೆ ಏಕೀಕರಣ ಪದ್ಧತಿಯು ಒಳ್ಳೇಯದೆಂಬುದು ಸರ್ವಸಮ್ಮತವಾದುದು. ಏಕೀಕರಣಪದ್ಧತಿಯೆಂದರೆ ಹಲವು ಉದಾಹರಣಗಳಿಂದ ಒಂದು ಸಾಮಾನ್ಯ ನಿಯಮವನ್ನು ಕಟ್ಟುವದು. ಈ ಪದ್ಧತಿಯಿಂದ ವಿದ್ಯಾರ್ಥಿಗಳು ಒಂದು ನಿಯಮವನ್ನು ಕಟ್ಟಿದ ತರುವಾಯ ಅವರು ಅದನ್ನು ಬೇರೆ ಹಲವು ಉದಾಹರಣಗಳಲ್ಲಿ ಅನ್ವಯಿಸಿ ನೋಡುತ್ತಿರಬೇಕು.

(೨) ಪಾರಿಭಾಷಿಕ ಶಬ್ದಗಳ ವ್ಯಾಖ್ಯೆಗಳನ್ನು ವಿದ್ಯಾರ್ಥಿಗಳು ಬರಿಯ ಪಾಠ ಮಾಡುವುದಕ್ಕಿಂತ ಮೊದಲು ಪರಿಭಾಷ್ಯಗಳ ( ನಾಮ, ಸರ್ವನಾಮ, ವಿಶೇಷಣ, ಕ್ರಿಯಾಪದ ಮುಂತಾದುವುಗಳ )ಗುರುತನ್ನು ಚೆನ್ನಾಗಿ ಹಿಡಿಯುವಂತೆ ಮಾಡಬೇಕು. ಶಾಸ್ತ್ರೀಯವಾದ ವ್ಯಾಖ್ಯೆಗಳನ್ನು ಅವರು ಕೊನೆಗೆ ಹೇಳುವಂತೆ ಮಾಡಬೇಕು. ಶುದ್ಧವಾದ ವ್ಯಾಖ್ಯೆಗಳನ್ನು ಪಾಠಮಾಡುವುದರಿಂದ ವ್ಯಾಕರಣದಲ್ಲಿ ಪ್ರಯೋಜನವುಂಟು.

(೩) ವ್ಯಾಕರಣದಲ್ಲಿ ಮಹತ್ವದ ವಿಷಯಗಳಾವುವು, ಸಾಮಾನ್ಯವಾದುವುಗಳಾವುವು ಎಂಬುದನ್ನು ವಿವೇಚಿಸಿ, ಮಹತ್ವದ ವಿಷಯಗಳಿಗಾಗಿಯೇ ವಿದ್ಯಾರ್ಥಿಗಳು ಹೆಚ್ಚು ವೇಳೆಯನ್ನೂ ಪರಿಶ್ರಮವನ್ನೂ ಉಪಯೋಗಿಸುವಂತೆ ನೋಡಿಕೊಳ್ಳಬೇಕು.

(೪) ಈ ಪುಸ್ತಕವು ವ್ಯಾಕರಣಪಾಠಗಳನ್ನು ಕಲಿಸುವ ಟಿಪ್ಪಣಿಗಳ ಪುಸ್ತಕವಲ್ಲ; ಕಲಿಸುವದಕ್ಕೆ ಮುಂಚೆ ಟಿಪ್ಪಣಿಗಳನ್ನು ಬರೆಯುವದು ಶಿಕ್ಷಕರ ಕೆಲಸವು. ಶಿಕ್ಷಕರು ಪಾಠಗಳನ್ನು ಕಲಿಸಿದ ತರುವಾಯ ವಿದ್ಯಾರ್ಥಿಗಳು ನೆನಪಿನಲ್ಲಿಟ್ಟುಕೊಳ್ಳಬೇಕಾದ ಫಲಿತಗಳು ಈ ಪುಸ್ತಕದಲ್ಲಿವೆ. ಮತ್ತು ಈ ಪುಸ್ತಕದಲ್ಲಿ ವ್ಯಾಕರಣಶಾಸ್ತ್ರಕಾರರ ಕ್ರಮದಂತೆ ವಿಷಯಾನುಕ್ರಮವುಂಟು. ಶಿಕ್ಷಕರು ವಾಕ್ಯದಿಂದಾರಂಭಿಸಿ ವಿಷಯಗಳನ್ನು ಕಲಿಸಬಹುದು.(ಕವ್ಹರ್೩ನೇಪು.ನೋ.)

ಆನಂದ ಗ್ರಂಥಮಾಲಾ, ಹುಬ್ಬಳ್ಳಿ ವರುಷ—೧ ಕುಸುಮ

# ಪುಷ್ಪಹಾರ

**( ಸಾಮಾಜಿಕ ಕಾದಂಬರಿ )**

ಬರೆದವರು:

**ಶ್ರೀಮತಿ ಜಯಲಕ್ಷ್ಮಿ ಆರ್. ಶ್ರೀನಿವಾಸನ್**

ಬೆಂಗಳೂರು

ನವ್ಹೆಂಬರ
೧೯೫೦

ಬೆಲೆ:
೧—೪—೦

## ಸಲಹೆಗಾರರು

ಶ್ರೀ ಎಸ್. ಆರ್. ಮಳಗಿ ಎಂ. ಎ., ಬಿ. ಟಿ.
ಶ್ರೀ ಎನ್. ಕೆ. ಕುಲಕರ್ಣಿ ಎಂ. ಎ., ಬಿ. ಟಿ.
ಶ್ರೀ ಆರ್. ವಿ. ಕುಲಕರ್ಣಿ ಎಂ. ಎ.,
ಶ್ರೀ ದೇಸಾಯಿ ದತ್ತಮೂರ್ತಿ

## ಸಂಪಾದಕರು

ಶ್ರೀ ಪಿ. ವೆಂಕೋಬಾಚಾರ್ಯ, ಬಿ. ಎ., ಬಿ. ಟಿ.



ಮುದ್ರಕರು :
ಎಸ್. ವ್ಹಿ. ಶ್ರೇಷ್ಠಿ
ರಾಯಲ್ ಪ್ರಿಂ. ಪ್ರೆಸ್ಸ್,
ಹುಬ್ಬಳ್ಳಿ.

ಪ್ರಕಾಶಕರು :
ಶ್ರೀ ಪಿ. ವೆಂಕೋಬಾಚಾರ್ಯ
೬೦೬೦ ಗೌಳಿಗಲ್ಲಿ
ಹುಬ್ಬಳ್ಳಿ.

# ನೂತನ ತಮಿಳು ಸಾಹಿತ್ಯದ ಸಂಕ್ಷಿಪ್ತ ಇತಿಹಾಸ

ತಮಿಳು ಸಾಹಿತ್ಯ ದ್ರಾವಿಡ ಸಂಸ್ಕೃತಿಯನ್ನು ತಿಳಿಯಲು ಹೆಚ್ಚು ಸಹಕಾರಿಯಾಗುತ್ತದೆಂಬ ಮಾತು ನಿರ್ವಿವಾದ. ಇದು ಸಂಸ್ಕೃತದಷ್ಟೇ ಹಳೆಯದು.

**ಆರಂಭ ಯುಗ** (೧೯೧೬ ರ ವರೆಗೆ)

೨೦ನೇ ಶತಮಾನದಿಂದ ಆರಂಭವಾದ ಹೊಸ ತಮಿಳು ಸಾಹಿತ್ಯವು ಅಜ್ಞಾತಾವಸ್ಥೆಯಲ್ಲಿತ್ತೆಂದು ಹೇಳಬಹುದು. ಈ ಕಾಲದಲ್ಲಿಯೇ ನೂತನ ಸಾಹಿತ್ಯದ ಬೆಳವಣಿಗೆಗೆ ಅನೇಕರು ದುಡಿಯಹತ್ತಿದರು. ಧರ್ಮಾವಲಂಬಿಗಳಾದ ತಮಿಳರು ಸಾಹಿತ್ಯದಲ್ಲಿ ಹೆಚ್ಚು ಹೆಚ್ಚು ಮತೀಯ ಗ್ರಂಥಗಳನ್ನೇ ಬರೆಯತೊಡಗಿದರು. ಇದರಿಂದ ಪೌರಾಣಿಕ ಗ್ರಂಥಗಳು ಸಂಸ್ಕೃತದಿಂದ ಅನುವಾದಿಸಲ್ಪಟ್ಟವು. ಜಾಫ್ನಾದ ಆರ್ಮುಗನಾವಳಾರ್ ರಾಮಾಯಣ ಭಾರತಗಳನ್ನು ಅನುವಾದಿಸಿದರು. ವೇದನಾಯಗಂಪಿಳ್ಳೈ ಯವರ "ಪ್ರತಾಪ ಮೊದಲಿಯಾರ್ ಚರಿತ್ರೆ" ಎಂಬುದೇ ತಮಿಳಿನಲ್ಲಿ ಹೊರಬಂದ "ಸಂತೋಷ ಸಾಹಿತ್ಯ"ದ ಮೊದಲನೆಯ ಕುಡಿ. ರಾಮಲಿಂಗ ಸ್ವಾಮಿಗಳ "**ಮಾನುಮುರೇ ಕಂಡ ವಾಚಕ**" ಎಂಬುದು ಹೊಸ ರೀತಿಯ ಕಾಲ್ಪನಿಕ ಕಾದಂಬರಿ. ಇವರ "**ತಿರುವರುತ್ಪ**" ಎಂಬ ಕವನ ಸಂಗ್ರಹದ ಕವನಗಳನ್ನು ಇಂದಿಗೂ ತಮಿಳರನೇಕರು ಸಭೆಗಳಲ್ಲಿ ಹಾಡಿ ಕೊಂಡಾಡುತ್ತಿದ್ದಾರೆ. ಸಂಬಂಧಂಪಿಳ್ಳೈ ಯವರ "**ಮನೋನ್ಮಣೀಯಮ್**" ಎಂಬ ಹೊಸ ನಾಟಕ ಹೆಸರಾದುದು. ರಾಜಮ್ಐಯ್ಯರ್ ಬರೆದ "**ಕಮಲಾಂಬಾಳಿನ ಕಥೆ**" ಎಂಬ ಹೊಸ ರೀತಿಯ ಕಾದಂಬರಿ, ತಮಿಳ ದೇಶದ ಒಂದು ಸಾಮಾನ್ಯ ಮನೆತನದ ಆಗು ಹೋಗುಗಳ ದಿವ್ಯ ಚಿತ್ರ. ಇದೇ ಸಮಯದಲ್ಲಿಯೇ ಸುಬ್ರಮಣ್ಯಐಯ್ಯರವರಿಂದ "ಸ್ವದೇಶ ಮಿತ್ರನ್" ಪತ್ರಿಕೆ ಆರಂಭಿಸಲ್ಪಟ್ಟಿತು. ಇವರು ಭಾರತದಲ್ಲಿ ಕಾಂಗ್ರೆಸ ಸಂಸ್ಥೆಯನ್ನು ಸ್ಥಾಪಿಸಿದವರಲ್ಲಿ ಮುಖ್ಯರಂತೆ.

**" ಭಾರತಿ " ಯುಗ :** ( ೧೯೧೬-೧೯೨೦ )

ಶ್ರೀ ಸುಬ್ರಮಣ್ಯ ಭಾರತೀಯವರು ಬಂಕಿಮ್‌ಚಂದ್ರರವರ ವಂದೇ ಮಾತರಮ್ ಎಂಬ ನಾಡಗೀತೆಯಿಂದ ಸ್ಫೂರ್ತಿಗೊಂಡು ತಮಿಳರಲ್ಲಿ ಹೊಸ ಜೀವ ಕಳೆಯನ್ನು ತುಂಬಿದರು.

ಬಂಗಾಲದ ವಿಭಜನೆ, ಬಿಪಿನ್‌ಚಂದ್‌ಪಾಲ್‌ರ ಗರ್ಜನೆ, ಲಾಲಾ ಲಜಪತರಾಯರ ದ್ವೀಪಾಂತರವಾಸ, ಇವುಗಳೆಲ್ಲವೂ ತಮಿಳ ಯುವಕರನ್ನು ಕೆರಳಿಸಿದವು. ಹೊಸ ಹುಮ್ಮಸ್ಸಿನಿಂದ ಅದೇ ತಾನೆ ಹೊರಬಂದ ಲೋಕಮಾನ್ಯ ತಿಲಕರು ಆರಂಭಿಸಿದ " ಹೋಂ ರೂಲ್ " ಸಂಸ್ಥೆಯ ಕರೆಗೆ ಇವರು ಓಗೊಟ್ಟು ಸಹಕರಿಸಿದರು. ೧೯೨೦ರ ವರೆಗೂ " ಭಾರತಿ " ಯವರ ಕೃತಿಗಳೇ ತಮಿಳ ದೇಶದಲ್ಲಿ ಹೆಚ್ಚು ಹೆಸರನ್ನು ಗಳಿಸಿದವು. ಭಾರತಿಯವರು ಉತ್ತಮ ಕವಿಗಳೂ, ಗದ್ಯಲೇಖಕರೂ, ನುರಿತ ಅನು ವಾದಕರೂ ಆಗಿದ್ದರು. " ಬಿಡುಗಡೆ " ಎಂಬ ಅವರ ಕವನ ತಮಿಳು ನಾಡಿನ ಮೂಲೆ ಮೂಲೆಯಲ್ಲಿಯೂ ಈಗಲೂ ಜನಪ್ರಿಯವಾಗಿದೆ.

" ಎದೆಯ ಬಾಗಿಸದೆ, ನೋವ ನೆನಸದೆ
ನಾಡ ಸೇವೆಗೆ ನುಡಿಯ ಏಳ್ಗಿಗೆ
ನುಗ್ಗು—ಮುನ್ನುಗ್ಗು ನೀ—ಮುಂದೆ ನಡೆ ಮುಂದೆ ನಡೆ "

ಎಂದು ಸಾರಿದ ಈ ಕವಿಯ ನುಡಿಗಳು ಜನರಿಗೆ ವೇದ ಮಂತ್ರವಾಗಿ ಪರಿಣಮಿಸಿದವು. " ದ್ರೌಪದಿ ಶಪಥಂ " ಎಂಬ ಇವರ ಕೃತಿಯಲ್ಲಿ ನವರಸಗಳನ್ನೂ ಕಾಣಬಹುದು. ತಮಿಳು ಭಾಷೆಯಲ್ಲಿ " ಗೀತೆ "ಯನ್ನು ಅನುವಾದಿಸಿದವರಲ್ಲಿ ಇವರು ಮೊದಲಿಗರು. ಶ್ರೀಗಳಾದ ಕೃಷ್ಣಸ್ವಾಮಿ ಶರ್ಮ, ಚಿದಂಬರಂ ಪಿಳ್ಳೈ, ವಿ. ವಿ. ಎಸ್. ಐಯ್ಯರ್, ಕೆ. ಸುಬ್ರಮಣ್ಯಂ ಪಿಳ್ಳೈ ಮತ್ತು ಸ್ವಾಮಿ ವೇದಾಚಲಂ, ಅಲ್ಲದೆ ಶ್ರೀನಿವಾಸ ಐಯ್ಯಂಗಾರರ ಕೃತಿಗಳು, ಡಾಕ್ಟರ್ ಸ್ವಾಮಿನಾಥ್ ಐಯ್ಯರರ ಆತ್ಮಚರಿತ್ರೆ, ನೆನಪಿ ನಲ್ಲಿಡತಕ್ಕವು.

**ಗಾಂಧೀಯುಗ :** ( ೧೯೨೦ ನಂತರ )

೧೯೨೦ ರ ನಂತರ ತಮಿಳ ಹೊಸ ಸಾಹಿತ್ಯ ಪ್ರವಾಹರೂಪದಲ್ಲಿ ಬರ ತೊಡಗಿತು. ಕವಿ ರಾಮಲಿಂಗಂ (ಆಸ್ಥಾನ ಕವಿ), ಶ್ರೀಗಳಾದ ಶುದ್ಧಾನಂದ

ಭಾರತಿ, ಟಿ. ಎಸ್. **ಚೊಕ್ಕಲಿಂಗಂ** ಪಿಳ್ಳೈ, ಆರ್. ಕೃಷ್ಣಮೂರ್ತಿ (ಕಲ್ಕಿ) ಮುಂತಾದವರು ಹೊಸ ಸಾಹಿತ್ಯವನ್ನು ನೀಡತೊಡಗಿದರು. ತಮಿಳ ಆಸ್ಥಾನ ಕವಿಯಾದ ವಿ. ರಾಮಲಿಂಗಂ ಪಿಳ್ಳೈ. ೧೮೮೮ ರಲ್ಲಿ ನಾಮಕ್ಕಲ್ಲಿನಲ್ಲಿ ಜನಿಸಿದರು. ಇವರ ತಂದೆ ಸರ್ಕಾರೀ ನೌಕರರು. ಆದುದರಿಂದ ೧೯೦೭ ರಲ್ಲಿ ಮೆಟ್ರಿಕ್ ಮುಗಿಸಿ ಕೊಂಚಕಾಲ ರೆವಿನ್ಯೂ ಖಾತೆಯಲ್ಲಿ ಕೆಲಸ ಮಾಡಿ, ಅಲ್ಲಿಯ ಕೃತ್ರಿಮ ವಾತಾವರಣಕ್ಕೆ ಬೇಸತ್ತು ಕೆಲಸಕ್ಕೆ ರಾಜೀನಾಮೆಯನ್ನಿತ್ತರು. ಇವರು ಉತ್ತಮ ಚಿತ್ರಕಾರರು. ೫ ನೇ ಜಾರ್ಜ ಚಕ್ರವರ್ತಿಯ ಚಿತ್ರವನ್ನು ಬರೆದುದಕ್ಕೆ ಇವರಿಗೆ ಸುವರ್ಣ ಪದಕ ದೊರೆಯಿತು. ಇವರ "ಆಡುರಾಟ್ಟೇ" (ರಾಟೆ) ಎಂಬ ಕವನ ೧೯೩೦ ರಲ್ಲಿ ಉಪ್ಪಿನ ಸತ್ಯಾಗ್ರಹದ ಕಾಲದಲ್ಲಿ ಸತ್ಯಾಗ್ರಹಿಗಳ ಘೋಷವಾಯಿತು. ಇದರಿಂದ ಅವರು ಸೆರೆಮನೆಯನ್ನು ಸೇರಬೇಕಾಯಿತು. ಇವರ ಸುಂದರ ಕಾಲ್ಪನಿಕ ಕಾದಂಬರಿ **"ಮಾಧವ ಕಮಲಂ"**, ಆತ್ಮ ಚರಿತ್ರೆ, ಹೊಸ ರೀತಿಯ ಕವನಗಳು ಜನರ ಮೆಚ್ಚುಗೆಯನ್ನು ಪಡೆದಿವೆ.

"ರಾಜರು ಮಹರಾಜರು ನೆಲಕುರುಳಿದರೂ
ಉಳಿಯುವನೇದಿಗು ನಮ್ಮಯನೇತ
ಗಾಂಧೀತಾತನು; ಆತನ ಕೀರ್ತಿಯು
ಚಿರ ಮೆರೆಯುವುದೂ, ಚಿರ ಉಳಿಯುವದು."

ಎಂಬ ಈ ಗೀತೆ ಸರ್ವಜನರ ಬಾಯಲ್ಲಿ ಆ ಸತ್ಯಾಗ್ರಹದ ಸಮಯದಲ್ಲಿ ವೇದ ಮಂತ್ರವಾಗಿ ಪರಿಣಮಿಸಿತು. ಅವರ ಮನೆ ಮಾತಿನ ಶೈಲಿ ಜನರ ಮೆಚ್ಚುಗೆಯನ್ನು ಪಡೆಯಿತು. ಹಿಂದಿನ ಕಥೆ ಪುರಾಣಗಳಲ್ಲಿ ಅವರಿಗೆ ನಂಬಿಗೆಯಿಲ್ಲ. ತಮ್ಮೆದುರು ಕಾಣುವ ವರ್ತಮಾನ ಕಾಲದ ಮಾನವ ಕೋಟಿಯ ಕಲ್ಯಾಣವೇ ಅವರ ಆದರ್ಶವಾಗಿತ್ತು. ಕನ್ನಡ ಕವಿಗಳಾದ ಬೇಂದ್ರೆ, ಪುಟ್ಟಪ್ಪನವರವಂತೆ ಇವರ ಹಾಡುಗಳನ್ನು ಮನೆ ಮನೆಗಳಲ್ಲಿ ಜನರಾಡಿಕೊಳ್ಳುತ್ತಿರುವರು.

"ವಾ. ರಾ." ರವರು ಬರೆದ ಸುಬ್ರಮಣ್ಯಭಾರತಿಯವರ ಜೀವನ ಚರಿತ್ರೆ ಒಂದು ಅತ್ಯುತ್ತಮ ಕೃತಿ. ಶ್ರೀಮತಿ ಕೋದನಾಯಕಿ ಅಮ್ಮಾಳ್ ಮತ್ತು ಸ್ವರ್ಣಾಂಬಾಳ್ ಸುಬ್ರಮಣ್ಯಂ, ಕವಿ ಭಾರತಿಯವರ

ಹೆಂಡತಿ, ಮತ್ತು ಅಂಬುಜಾಂಬಾಳ್ ಹೆಸರಾಂತ ಬರಹಗಾರರು "ಕುಮು ದಿನಿ" ಎಂಬ ಕಾವ್ಯನಾಮದ ಕತೆಗಾರ್ತಿ ಅನೇಕ ಕತೆಗಳನ್ನು ತಮಿ ಳಿಗೆ ಅನುವಾದಿಸಿದ್ದಾರೆ.

ಶರತ್‌ಚಂದ್ರ ಮತ್ತು ರಮೇಶ್‌ಚಂದ್ರ ದತ್ತರ ಕಾದಂಬರಿಗಳು ಅನುವಾದಿಸಲ್ಪಟ್ಟಿವೆ. ಬಂಕಿಮಚಂದ್ರರ ಕಾದಂಬರಿಗಳನ್ನು ಟಿ. ಎನ್. ಕುಮಾರಸ್ವಾಮಿಯವರು ಅನುವಾದಿಸಿದ್ದಾರೆ. ಮಹಾತ್ಮಾಜೀಯವರ **ಆತ್ಮ ಚರಿತ್ರೆ,** ಟಾಗೂರರ ಕೃತಿಗಳು, ಜವಹರ್‌ಲಾಲ್‌ರ ಬರಹಗಳೂ, ಪ್ರೇಮಚಂದ್ರರ ಹಿಂದೀ ಕತೆಗಳೂ, ಖಾಂಡೇಕರರ ಮರಾಠೀ ಕಾದಂಬರಿ ಗಳು. ಮಾನ್ಯ ಶ್ರೀ ಕೆ. ಎಂ. ಮುನ್ಶಿಯವರ ಎರಡು ಗುಜರಾತಿ ಕಾದಂಬ ರಿಗಳು ಅಲ್ಲದೆ ಲೋಕಮಾನ್ಯ ತಿಲಕರ ಗೀತಾರಹಸ್ಯದ ಕೊಂಚ ಭಾಗವು ತಮಿಳಿಗೆ ಬಂದಿವೆ.

ಮದರಾಸಿನ ಸುಗುಣವಿಲಾಸ ಸಭೆಯ ಮುಖ್ಯ ಪುರುಷರೂ, ನಾಟ್ಯ ವಿಶಾರದರೂ ಆದ, ಪಿ. ಸಂಬಂಧಂ ಮೊದಲಿಯಾರರ ಹೆಸರು ನೆನಪಿನಲ್ಲಿ ಡತಕ್ಕುದು. ಇವರ ನಾಟಕಗಳು ಸುಮಾರು ನೂರರ ಸಂಖ್ಯೆಗೆ ಮಿಕ್ಕಿವೆ. ಮಾಧವಯ್ಯರರ **ತಿರುಮಲೈ ಸೇತುಪತಿ, ಬಾರಿಸ್ಟರ್ ಪಂಜುನಾಥಂ,** ವಿ. ಕೆ. ಸೂರ್ಯನಾರಾಯಣರ **ಕಲಾವತಿ, ರೂಪವತಿ, ಮಾನಾ ವಿಜಯಂ,** ಸುಂದರಂ ಪಿಳ್ಳೈಯವರ **ಮನೋನ್ಮಣೀಯಂ,** ಎಫ್. ಜಿ. ನಟೇಶಯ್ಯರ **ಜ್ಞಾನಸುಂದರಿ,** ಎಸ್. ಕೆ. ಪಾರ್ಥಸಾರಥಿಯವರ ಪೌರಾಣಿಕ ನಾಟಕಗಳು ಹೆಸರಾದ ನಾಟಕಗಳು. ಇನ್ನು ಕಾಲ್ಪನಿಕ ಸಾಹಿತ್ಯದ ಮಾತು. ರಾಜಮಯ್ಯರರ **ಕಮಲಾಂಬಾಳ್,** ಆರಣಿ ಕುಪ್ಪಸ್ವಾಮಿಐಯ್ಯರರ ಕೃತಿಗಳೂ, ರಂಗರಾಜುರವರ **ಚಂದ್ರಕಾಂತ, ಮೋಹನ ಸುಂದರಂ, ವಿಜಯನಗರಂ,** ಎಡುವೂರ್ ದೊರೆಸ್ವಾಮಿ ಐಯ್ಯಂಗಾರರ **ಸುಂದರ ಕೊಕಿಲಂ, ಕುಂಭಕೋಣಂವಕೀಲ** ಮತ್ತು ಕೋದನಾಯಕಿಯವರ ಕಾದಂಬರಿಗಳೂ, ಕತೆಗಳೂ ಹೆಸರು ಪಡೆದಿವೆ. ಶ್ರೀಮತಿ ಜಯಲಕ್ಷ್ಮಿ ಆರ್. ಶ್ರೀನಿವಾಸನ್‌ರವರು ತಮಿಳಿನಲ್ಲಿ ಅನೇಕ ಕತೆಗಳನ್ನು "ಪುಷ್ಪಹಾರ" ಎಂಬ ಕಾಬಂದರಿಯನ್ನು ಬರೆದಿದ್ದಾರೆ.

**ವಿಡಂಬನ ಸಾಹಿತ್ಯದೃಷ್ಟಿಯಲ್ಲಿ ಎಸ್. ವಿ. ವಿ. (S. V. V.)**

ಯವರು ಕನ್ನಡದ ನಾ. ಕಸ್ತೂರಿ ಮತ್ತು ಶ್ರೀರಂಗರಂತೆ, ಸಣ್ಣಕತೆಗಳನ್ನೂ ತಮಿಳಿನಲ್ಲಿ ಬರೆದಿರುವರು. ಮಕ್ಕಳ ಸಾಹಿತ್ಯವೂ ಬೆಳೆದಿದೆ. ಈಗಿನ ವಾರ ಪತ್ರಿಕೆಗಳಾದ ಆನಂದ ವಿಕಟನ್, ಕಲ್ಕಿ, ಕಲೈಮಗಳ್, ಕದಿರ್, ಮೂಲಕ ಸಣ್ಣ ಕಥಾ ಸಾಹಿತ್ಯ ಬೆಳೆಯುತ್ತಿರುವುದಲ್ಲದೆ, ಉದ್ದವಾದ ಕಾದಂಬರಿಗಳೂ ಇವುಗಳ ಮೂಲಕ ಬೆಳಕು ಕಾಣುತ್ತಿವೆ. ಇವುಗಳಲ್ಲಿ ಹೆಸರಾಂತ ಸಾಹಿತಿಗಳು ಗುಪ್ತ ನಾಮದಿಂದ ಬರೆಯುವ ಶಶಿ,ಕಲ್ಕಿ ಇವರ ಹೆಸರನ್ನು ಮರೆಯಲಾಗದು. ಇದರ ಜತೆಗೆ ಜನರ ಮೆಚ್ಚುಗೆಯನ್ನು ಪಡೆದು ಉತ್ತಮ ಸಣ್ಣ ಕತೆ ಕಾದಂಬರಿ ಸಾಹಿತ್ಯವನ್ನು ನಿರ್ಮಿಸಿದ ಶ್ರೀಗಳಾದ ಕೆ. ವಿ. ಜಂಬುನಾಥನ್, ಟಿ. ಜಿ. ರಂಗನಾಥನ್, ಕೆ. ಪಿ. ರಾಜಗೋಪಾಲನ್, ಎಸ್. ಪಿಚ್ಚುಮೂರ್ತಿ, ತಿರುಮಲನ್, ದೇವನ್, ಕಾ. ಶ್ರೀ., ಶ್ರೀ. ವಿಂದನ್, ಮುಂತಾದವರ ಮತ್ತು ಶ್ರೀಮತಿಯರಾದ ಕೆ. ಸಾವಿತ್ರಿ ಅಮ್ಮಾಳ್, ಮತ್ತು ಕುಮುದಿನಿಯವರ ಹೆಸರುಗಳು ನೆನಪಿಡ ತಕ್ಕುವು. ಇವರೆಲ್ಲರಿಗೆ ಮಾರ್ಗದರ್ಶಕರಾದ ಶ್ರೀ ಸಿ. ರಾಜಗೋಪಾಲಾ ಚಾರ್ಯರ ಮತ್ತು ಎಸ್.ವಿ.ವಿ. ಇವರ ಹೆಸರು ಹೊಸ ತಮಿಳು ಸಾಹಿತ್ಯ ದಲ್ಲಿ ಅಮರವಾಗಿ ಉಳಿದಿದೆ ಎಂದು ಹೇಳಲು ಅಭ್ಯಂತರವಿಲ್ಲ. ತಮಿಳು ಕತೆಗಳು ಕನ್ನಡದಲ್ಲಿ ಇತ್ತೀಚೆಗೆ ಪಿ. ವೇಣುಗೋಪಾಲ ( ರಾಧೇಶ )ರಿಂದ ಬರಹತ್ತಿವೆ. ಉಭಯ ಭಾಷಾವಿಶಾರದರಾದ ಇತರ ಹಿರಿಯ ಸಾಹಿತಿಗಳೂ ಈ ಕೆಲಸವನ್ನು ಕೈಕೊಂಡು ಉತ್ತಮವಾದ ಕನ್ನಡ ಕತೆಗಳನ್ನು ತಮಿಳಿಗೆ ಪರಿವರ್ತಿಸಿದರೆ ಒಳಿತಲ್ಲವೆ?

೧೦—೧೧—೫೦ — **ಸೀತಾಪತಿ**

## ಮುಂದಿನ ವರುಷ ಮಾಲೆಯಲ್ಲಿ ಬರಲಿರುವ ಪುಸ್ತಕಗಳು :

**ಸುವರ್ಣದೀಪ** ( ಕಾದಂಬರಿ ) **ಶ್ರೀ ಅ. ನ. ಕೃಷ್ಣರಾಯರು**

**ಇವೆತ್** ,, **ಗಾಯ್. ಡಿ. ಮೋಪಾಸಾ**

**ಕಾಂತಂ ಕತೆಗಳು** (ಹಾಸ್ಯ ಚಿತ್ರಗಳು) **ಶ್ರೀ ಮುನಿಮಾಣಿಕ್ಯಂ**

ತಮಿಳು ಇಲ್ಲವೆ ಗುಜರಾತಿ ಕಾದಂಬರಿ.

# ಸಂಪಾದಕರ ಮಾತು

ಈ ವರುಷದ ಕೊನೆಯ ಪುಷ್ಪವಾದ ಈ "ಪುಷ್ಪಹಾರ"ವನ್ನು ತಮ್ಮೆಲ್ಲರ ಮುಂದಿರಿಸಲು ಸಂತೋಷವೆನಿಸುತ್ತದೆ. ಈ ನಾಲ್ಕು ಹೊತ್ತಿಗೆಗಳು ಬೆಳಕು ಕಾಣಲು ಸಹಾಯಮಾಡಿದ ಸಾಹಿತ್ಯ ಮಿತ್ರರಿಗೆ ನಮ್ಮ ಅನಂತ ವಂದನೆಗಳು. ಇವುಗಳನ್ನು ಆದರದಿಂದ ಬರಮಾಡಿಕೊಂಡು ನೆರವನ್ನು ನೀಡಿದ ಸಹಾಯಕರ, ಚಂದಾದಾರರಬೆಂಬಲವು ಚಿರಸ್ಮರಣೀಯವೇಸರಿ.

ಮುಂದಿನ ವರುಷದಲ್ಲಿ ಮೊಪಾಸಾ, ಚಕೋವ್‌ರ ಕಾದಂಬರಿಗಳನ್ನು ತೆಲುಗಿನ ಉತ್ತಮ ಕಾದಂಬರಿ ಮತ್ತು ಏಕಾಂಕ ಸಂಗ್ರಹವನ್ನು, ಅಲ್ಲದೆ ಹಾಸ್ಯಪೂರಿತ ವಿಡಂಬನ ಚಿತ್ರಗಳ ಸಂಕಲನವನ್ನೂ ಕೊಡಬೇಕೆಂದು ಸಂಕಲ್ಪಿಸಿದ್ದೇವೆ. ಶ್ರೀ ಅ. ನ. ಕೃಷ್ಣರಾಯ ಬರೆದು ಕಾದಂಬರಿಯನ್ನು ಕೊಡಲು ಒಪ್ಪಿರುವರೆಂದು ತಿಳಿಸಲು ಸಂತೋಷವೆನಿಸುತ್ತದೆ. ಎರಡನೆಯ ವರುಷದ ಮೊದಲನೆಯ ಕುಸುಮವನ್ನು ಚಂದಾದಾರರಿಗೆ ವರುಷದ ಹಣಕ್ಕೆ ವಿ. ಪಿ. ಮಾಡುತ್ತೇವೆ. ಅದನ್ನು ಸ್ವೀಕರಿಸಿ ಮಾಲೆಯು ಮುಂದುವರಿಯಲು ಸಹಕರಿಸಬೇಕಾಗಿ ಪ್ರಾರ್ಥನೆ. ಇಷ್ಟವಿಲ್ಲದವರು ಮುಂಚಿತವಾಗಿಯೇ ಬೇಡವೆಂದು ತಿಳಿಸಬೇಕೆಂದು ನಮ್ಮ ಕೋರಿಕೆ.

ಸೋದರಿ ಸಾಹಿತಿ ಶ್ರೀಮತಿ ಜಯಲಕ್ಷ್ಮಿ ಆರ್. ಶ್ರೀನಿವಾಸನ್‌ರವರು ತಮ್ಮ ತಮಿಳು ಕಾದಂಬರಿಯ ಈ ಅನುವಾದವನ್ನು ನಮ್ಮ ಮಾಲೆಗಾಗಿ ಬಹುಬೇಗ ಅನುವಾದಿಸಿ ಕೊಟ್ಟುದುದಕ್ಕೆ ಅವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು. ಹೊಸ ತಮಿಳು ಸಾಹಿತ್ಯದ ಬಗ್ಗೆ ಎರಡು ಮಾತು ಬರೆದ ಶ್ರೀ ಸೀತಾಪತಿಗಳಿಗೆ ನಾವು ಆಭಾರಿಯಾಗಿದ್ದೇವೆ.

ಈ ಪುಸ್ತಕವನ್ನು ಬೇಗ ಮುದ್ರಿಸಿ ಕೊಟ್ಟ ಶ್ರೀ ಎಸ್. ವ್ಹಿ. ಶ್ರೇಷ್ಠಿಯವರ ಉಪಕಾರ ಸ್ಮರಿಸದೆ ಇರಲಾರೆವು.

ಹುಬ್ಬಳ್ಳಿ
೧೪—೧೧—೫೦

**ಸಂಪಾದಕ**

# ನನ್ನ ನುಡಿ



ಪ್ರಪಂಚದಲ್ಲಿ ಈಗ ಸಣ್ಣ ಕತೆಗಳಿಗೂ ಮನ್ನಣೆ ಹೆಚ್ಚುತ್ತಲಿದೆ. ತಮಿಳು ನಾಡಿನ ಸುರಿತ ಸಣ್ಣ ಕಥಾ ಕಾದಂಬರಿ ಲೇಖಕರ ಸಂಖ್ಯೆಯು ಅಧಿಕ ಪ್ರಮಾಣದಲ್ಲಿ ಹೆಚ್ಚುತ್ತಲಿರುವದು ಪ್ರಗತಿ ಲಕ್ಷಣದ ಕುರುಹೆಂದು ಹೇಳಬಹುದು. ತತ್ಪರಿಣಾಮವಾಗಿ ತಮಿಳು ಜನರ ಜಾಣ್ಮೆಯು ವೇದ್ಯ ವಾಗುತ್ತದೆ.

ಸಣ್ಣ ಕತೆ ಕಾದಂಬರಿ ಇವುಗಳು ಪ್ರಪಂಚದ ಸೌಂದರ್ಯ ಕಲೆಗಳಲ್ಲಿ ಒಂದು ಸ್ಥಾನವನ್ನು ಪಡೆದಿವೆ. ಇವಕ್ಕೆ ಜಾತಿ ಮತ ಕಾಲ ದೇಶ ಭೇದ ವಾವುದೂ ಇಲ್ಲ. ಆಯಾ ದೇಶದ ಜನಸಾಮಾನ್ಯಕ್ಕನುಗುಣವಾಗಿ ಇವು ಗಳ ಪ್ರಭಾವ ಪ್ರಗತಿ ಹೊಂದಿ ಬೆಳೆಗುತ್ತಿದೆ. ಪಾಶ್ಚಿಮಾತ್ಯ ದೇಶಗಳಲ್ಲೂ ಸಹ ೧೯ ನೇ ಶತಮಾನದಲ್ಲಿಯೇ ಈ ಕಲೆಯು ಆರಂಭ ಹೊಂದಿ ಅಭಿವೃದ್ಧಿ ಹೊಂದುತ್ತಿರುವುದನ್ನು ಕಾಣುತ್ತಿರುವೆವು. ಆದರೆ ತಮಿಳು ನಾಡಿನಲ್ಲಿ ಈ ಕಲೆ ಸರಿಯಾದ ರೂಪ ತಾಳಿ ಕೇವಲ ಅಲ್ಪ ಕಾಲದೊಳಗಾಗಿಯೇ ಮುಂದು ವರಿಯುತ್ತಿರುವದು ಅತ್ಯಾನಂದದಾಯಕವಾಗಿದೆ.

ನಾನು ತಮಿಳು ನಾಡಿನವಳು. ನನಗೆ ತಮಿಳೂ, ಕನ್ನಡವೂ ಎರಡೂ ಒಂದೇ. ನಾನು ಒಂದೇ ನಿಷ್ಠೆಯಿಂದ ಈ ಎರಡೂ ಭಾಷೆಗಳ ಸಾಹಿತ್ಯ ಸೇವೆ ಮಾಡುತ್ತಿರುವದೇ ಇದಕ್ಕೊಂದು ನಿದರ್ಶನ.

ಹಿಂದೂ ದೇಶದ ಸಕಲ ಭಾಷೆಗಳಲ್ಲೂ ಕೂಡ ಕತೆಗಾರರ ಜನ ಗಣಿತ ಸಂಖ್ಯೆಯನ್ನು ತೆಗೆದು ನೋಡಿದರೆ ತಮಿಳು ನಾಡೂ ಸಹ ಅಗ್ರ ತಾಂಬೂಲ ದೊರಕಿಸಲು ಅರ್ಹತೆಯನ್ನು ಪಡೆಯುತ್ತಿದೆಯೆಂದು ನನ್ನ ದೃಢ ವಾದ ನಂಬಿಕೆ. ಬಂಗಾಲಕ್ಕೆ ಅಗ್ರ ತಾಂಬೂಲವೆಂದು ಬಲ್ಲವರು ಹೇಳ ಬಹುದು. ಆದರೆ ಈಚೆಗೆ ಸಾಹಿತ್ಯ ಪ್ರಪಂಚದಲ್ಲಿ ಏರ್ಪಟ್ಟಿರುವ ಸ್ಫೂರ್ತಿ ದಾಯಕವಾದ ಬದಲಾವಣೆಯಿಂದ ತಮಿಳುನಾಡು ತನ್ನ ಬರೆಹ ಗಾರರ ಅಧಿಕ ಪ್ರಮಾಣ ಸಂಖ್ಯೆಯಿಂದಲೂ ಅವರುಗಳ ಜಾಣ್ಮೆಯಿಂದಲೂ ಅಗ್ರ ತಾಂಬೂಲಕ್ಕೇ ಕೈ ಚಾಚುತ್ತಲಿದೆ; ಪ್ರಗತಿಶೀಲ ಸಾಹಿತ್ಯ ನಿರ್ಮಿತವಾಗು

ತ್ತಿದೆ. ತಮಿಳು ದೇವಿಯ ಉಪಾಸಕರಲ್ಲಿ ಅತ್ಯುತ್ತಮ ಬರೆಹಗಾರರಾದ ಶ್ರೀಗಳಾದ ರಾಜಾಜಿ, 'ಕಲ್ಕಿ', S. V. V., R. V. ಜಗನ್ನಾಥನ್ ಕೊನಷ್ಟೆ, P.M. ಕಣ್ಣನ್, R. ಷಣ್ಮುಖ ಸುಂದರಂ, ವ. ರಾ., ಕಾಜರು T. N. ಕುಮಾರಸ್ವಾಮಿ, ಶ್ರೀಮತಿಗಳಾದ ಗುಹಪ್ರಿಯೈ (ಸ್ವರ್ಣಾಂಬಾಳ್ ಸುಬ್ರಹ್ಮಣ್ಯಂ), 'ಕುಮುದಿನಿ' K. ಸಾವಿತ್ರಿಅಮ್ಮಾಳ್, K. ಸರಸ್ವತಿ ಅಮ್ಮಾಳ್, ಸರೋಜಾ ರಾಮಮೂರ್ತಿ, ವೈ. ಮೂ., ಕೋದೈನಾಯಕಿ ಯಮ್ಮಾಳ್ ಮುಂತಾದವರ ನವರಸಭರಿತವಾದ ಮತ್ತು ಉತ್ತಮವಾದ ಕತೆ ಗಳನ್ನು ಓದಿದಷ್ಟು ಇನ್ನೊಂದು ಸಲ ಓದಬೇಕೆಂದೆನಿಸುತ್ತದೆ.

ಶ್ರೀಗಳಾದ 'ಕಲ್ಕಿ', P. M. ಕಣ್ಣನ್, ವಡುವೂರ್ ದೊರೈಸ್ವಾಮಿ, (ಐಯ್ಯಂಗಾರ್), ಶ್ರೀಮತಿಗಳಾದ 'ಲಕ್ಷ್ಮೀ' (ತ್ರಿಪುರ ಸುಂದರಿ) ಗುಹ ಪ್ರಿಯೈ ವೈ.ಮೂ., ಕೋದೈನಾಯಕಿಯಮ್ಮಾಳ್, K. ಸಾವಿತ್ರಿಯಮ್ಮಾಳ್, ಇವರುಗಳು ಹೆಸರಾಂತ ಕಾದಂಬರೀ ಕಾರರಾಗಿಯೂ ಹೆಸರು ಪಡೆ ದಿರುವರು.

ತಮಿಳು ನಾಡಿನ ಹೆಸರುವಾಸಿಯಾದ ಬರೆಹಗಾರರ ಅತ್ಯುತ್ತಮ ಕತೆ ಗಳಲ್ಲಿ ಒಂದೊಂದನ್ನು ಶೇಖರಿಸಿ 'ಕಥೈಕ್ಕೋವೈ' ಅಂದರೆ 'ಕಥಾ ಸಂಕಲನ' ವನ್ನು ಮೊದಲು ವರ್ಷ ನಲವತ್ತು ಕತೆಗಳನ್ನೊಳಗೊಂಡ ಗ್ರಂಥವೊಂದನ್ನು ಎರಡನೆಯ ವರ್ಷ ೫೦ ಹೊಸ ಕತೆಗಾರರ ಕಥಾ ಸಂಕಲನವನ್ನೂ ಮೂರನೆ ವರ್ಷ ೫೦ ಹೊಚ್ಚ ಹೊಸ ಕತೆಗಾರರ ಕಥಾ ಸಂಕಲವನ್ನೂ ಮದರಾಸಿನ ಅಲಯನ್ಸ್ ಕಂಪನಿಯವರು ಹೊರಡಿಸಿರುವರು. ಇದೇ ರೀತಿ ಪ್ರತಿವರುಷವೂ ಕೂಡ ನಾಡಿಗೆ ಹೊಸ ಹೊಸ ಕತೆಗಾರರುಗಳನ್ನು ಪರಿಚಯ ಮಾಡಿ ಕೊಡು ತ್ತಿರುವ ಈ ಸುಪ್ರಸಿದ್ಧ ಪ್ರಕಟನಾಲಯದ ಸಂಚಾಲಕರ ಕೆಲಸ ಹೊಗಳ ತಕ್ಕದ್ದೇ. ಈ ಕಂಪನಿಯಲ್ಲದೆ ಮದರಾಸಿನ 'ಕಲೈಮಗಳ್' ಕಾರ್ಯಾ ಲಯಂ, ಜ್ಯೋತಿನಿಲಯಂ, ಪುದುಮಲರ್ ನಿಲಯಂ, ಅಮುದನಿಲಯಂ, ತಮಿಳ್ ನಾಡನಿಲಯಂ, ಶಕ್ತಿಪ್ರಚುರಾಲಯಂ, ದಿನಮಣಿ ವೆಳಿ ಯೀಡು 'ಕೊಯಿಮುತ್ತೂರಿನ ಪುದುಮಲರ್ ನಿಲಯಂ, ಪುದುಕೋಟ್ಟೈಯ ಓಂಕಾರನೂಲಗಂ,' 'ಅರುಳ ನಿಲಯಂ' ಎಂಬ ಸುಪ್ರಸಿದ್ಧ ಪ್ರಕಟನಾಲಯ ಗಳು ಉತ್ತಮೋತ್ತಮ ತಮಿಳು ಕೃತಿಗಳನ್ನು ಪ್ರಕಟಿಸುತ್ತ ಸಾಹಿತ್ಯಸೇವೆ

ನಡೆಸುತ್ತಲಿವೆ. ತಮಿಳು ಸ್ತ್ರೀ ಬರೆಹಗಾರರ ಸಂಖ್ಯೆ ಮಾತ್ರವೇ ನೂರರ ಮೇಲ್ಪಟ್ಟಿವೆಯೆಂದರೆ ಆಶ್ಚರ್ಯವೇನೂ ಇಲ್ಲ.

ತಮಿಳು ದೇವಿಯ ಮುದ್ದು ಗುವರರಲ್ಲಿ ದಿವಂಗತ ಶ್ರೀಮಾನ್ S. V. V. ಯವರ ಹಾಸ್ಯಪೂರಿತ ಮನರಂಜಕ ಕತೆಗಳೂ, ರಾಜಾಜಿ ಯವರ ಸರಸ ಸುಲಭ ಶೈಲಿಯಲ್ಲಿ ಬರೆಯಲ್ಪಟ್ಟ ನೀತಿಬೋಧಕ ಕತೆಗಳೂ, ಶ್ರೀಮಾನ್ ಕೆ. ವಿ. ಜಗನ್ನಾಥನ್‌ರವರ ಹಳೆಯ ಮತ್ತು ಹೊಸ ಸುವಾಸನೆ ಯನ್ನು ಬೀರುವ ಮನಮುಟ್ಟುವಂತಹ ಕತೆಗಳೂ, 'ಕಲ್ಕಿ'ಯವರ ಐತಿಹಾಸಿಕ ಕತೆಗಳೂ, 'ಕೊನಷ್ಟೆ'ಯವರ (ವಕ್ರವೆಂದು ಅರ್ಥ) ತಿಳಿ ಹಾಸ್ಯಪೂರಿತ ಕತೆಗಳೂ ಕು. ಪ. ರಾಜಗೋಪಾಲನ್‌ರವರ ಪ್ರಣಯ ಚಿತ್ರ ಗಳೂ, 'ಷಣ್ಮುಖಸುಂದರಂ'ರವರ ಹಳ್ಳಿಯ ಚಿತ್ರಗಳೂ, ತಿರುಜ್ಞಾನ ಸಂಬಂಧರವರ ಅದ್ಭುತ ಕಲ್ಪನಾ ಚಿತ್ರಗಳೂ, ಸಂಬಂಧಂ ಮುದಲಿಯಾರರ ಸುರಸ ಸುಂದರ ನಾಟಕಗಳೂ ತಮಿಳು ತಾಯಿಗೆ ದಿನೇ ದಿನೇ ಹೊಸ ಕಾಣಿಕೆಗಳನ್ನು ನೀಡುತ್ತಿವೆ. ತಮಿಳು ಮಹಾಕವಿ ಭಾರತಿಯವರು ತಮಿಳು ಭಾಷೆಯನ್ನು 'ಕನ್ನಿತ್ತ ಮಿೞ್' ಎಂಬ ಮುದ್ದು ಹೆಸರಿನಲ್ಲಿ ಕರೆದಿರುವರು. ಇದು ಸತ್ಯ. ತಮಿಳು ದೇವಿಯು ಎಂದೆಂದೂ ನವ ಯೌವನದ ಕನ್ಯೆ. ಅವಳ ಮುದ್ದು ಮಕ್ಕಳು ಕವಿವರ್ಯರೂ ಆದ ವಿನಾಯಕಂ ಪಿಳ್ಳೈ ಮತ್ತು ರಾಷ್ಟ್ರ ಕವಿ ಪಟ್ಟವನ್ನಲಂಕರಿಸಿದ (Poet Laureate) ನಾಮಕಲ್ ರಾಮ ಲಿಂಗಂ ಪಿಳ್ಳೆಯವರ ಕವಿತಾರತ್ನಗಳನ್ನು ಓದಿದರಲ್ಲವೇ ತಮಿಳು ಭಾಷೆಯ ವೈಭವ ತಿಳಿಯುವದು?

ಸುಪ್ರಸಿದ್ಧ ತಮಿಳು ಪತ್ರಿಕೆ 'ಸ್ವದೇಶ ಮಿತ್ರನ್'ನಲ್ಲಿ ಅವ್ಯಾಹಿತವಾಗಿ (in instalments) ಪ್ರಚುರವಾಗಿ ಮನ್ನಣೆಪಡೆದ ನನ್ನ ತಮಿಳು ಕಾದಂಬರಿ '**ಪುಷ್ಪಹಾರ**'ವನ್ನು ಆನಂದ ಗ್ರಂಥಮಾಲೆಯ ಕುಸುಮವಾಗಿ ಪ್ರಕಟಿಸಿ ನನ್ನನ್ನು ಗೌರವಿಸಿದ ಶ್ರೀಮಾನ್ ಪಿ. ವೆಂಕೋಬಾಚಾರ್ಯರಿಗೆ ನನ್ನ ಹೃತ್ಪೂರ್ವಕ ವಂದನೆಗಳು. ಕನ್ನಡ ಮಹಾಜನರು ಈ ನನ್ನ ಪುಟ್ಟ ಕಾಣಿಕೆ ಯನ್ನು ಸ್ವೀಕರಿಸಿ ಓದಿ ಕೊಂಚವಾದರೂ ಸಂತೋಷ ಪಟ್ಟರೆ ನನ್ನ ಪ್ರಯತ್ನ ಸಫಲವಾಗುವದು.

**ಜಯಲಕ್ಷ್ಮೀ ಆರ್. ಶ್ರೀನಿವಾಸನ್**

# ಅರ್ಪಣೆ



ನನ್ನ

ಪೂಜ್ಯ ಪತಿದೇವರ

ಅಡಿದಾವರೆಗಳಲ್ಲಿ ಭಕ್ತಿ

ಪ್ರೇಮ

ವಿಶ್ವಾಸದಿಂದ

# ಪುಷ್ಪಹಾರ

## ೧

ಶಿವಶಂಕರಯ್ಯರವರು ರಾಣೀಪೇಟೆಯಲ್ಲಿ ಒಬ್ಬ ಜಮೀನ್ದಾರರು. ಸಕಲ ಸಂಪತ್ ಸೌಭಾಗ್ಯಗಳನ್ನೂ ಹೊಂದಿದವರು. ಆದರೆ, ದೇವರು ಅವರಿಗೊಂದು ಕೊರತೆಯನ್ನುಂಟುಮಾಡಿದ್ದನು. ಅವರಿಗೆ ಸಂತಾನ ಭಾಗ್ಯ ಇಲ್ಲದಿರುವುದಕ್ಕೆ ಕೊರಗುತ್ತಿದ್ದರು. ಆದುದರಿಂದ ಶಿವಶಂಕರಯ್ಯರರೂ ಅವರ ಧರ್ಮಪತ್ನಿ ಸ್ವರ್ಣಾಂಬಾಳ್‌ರವರೂ ತಾಯಿಯಿಲ್ಲದ ತಬ್ಬಲಿ ಮಗು ರಾಮಚಂದ್ರನನ್ನು ತಮ್ಮ ಸ್ವಂತ ಮಗನಂತೆ ಮುದ್ದಾಗಿ ಸಾಕಿ ಸಲಹುತ್ತಿದ್ದರು. ಆದರೆ, ಇದರಿಂದ ತೃಪ್ತಿಹೊಂದದ ಸ್ವರ್ಣಾಂಬಾಳ್ ಮಾತ್ರ ಒಳಗೊಳಗೇ ಕುದಿಯುತ್ತಿದ್ದಳು. ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗು ಸುಖ ಅನುಭವಿಸಬೇಕಾದ ಸ್ಥಳದಲ್ಲಿ ಈ ತಬ್ಬಲಿ ಹುಡುಗ ವೈಭವವಾಗಿ ಅನುಭವಿಸುತ್ತಿರುವನಲ್ಲಾಯೆಂದು ಕ್ರಮೇಣ ರಾಮಚಂದ್ರನ ಮೇಲೆ ವೈಷಮ್ಯ ತೋರುತ್ತ ಬಂದಳು.

ರಾಮಚಂದ್ರನಂತೂ ಈ ದಂಪತಿಗಳನ್ನು ಪ್ರತ್ಯಕ್ಷ ದೇವತೆಗಳೆಂದೇ ಭಾವಿಸಿ ಅವರುಗಳ ಮಾತುಗಳನ್ನು ಚಾಚೂ ತಪ್ಪದೆ ಪಾಲಿಸುತ್ತ, ವಿನಯಸಂಪನ್ನವಾಗಿಯೂ, ಜಾಣನಾಗಿಯೂ ಬೆಳೆಯುತ್ತಿದ್ದನು. ಹುಡುಗನು ಬಹಳ ಚುರುಕಾಗಿ ಓದುತ್ತಿದ್ದನು. ಹತ್ತೊಂಬತ್ತನೇಯ ಪ್ರಾಯದಲ್ಲೇ ಬಿ. ಎ. ಆದನು. ಅಷ್ಟರೊಳಗೆ ಐಯ್ಯರು ಅವನಿಗೆ ಒಬ್ಬ ಚೆಲುವೆಯನ್ನು ತಂದು ಮದುವೆ ಮಾಡಿ ಬಿಟ್ಟರು. ಹುಡುಗಿಗೆ ಅಜ್ಜರೊಬ್ಬರಿದ್ದರು. ಆ ಮುದುಕರು ಶಿವಶಂಕರಯ್ಯರಿಗೆ ದೂರದ ಬಂಧು.

ರಾಮಚಂದ್ರನನ್ನು ಅರ್ಧ ಘಳಿಗೆ ಸುಮ್ಮನಿರಲು ಬಿಡದೆ ಕೆಲಸ ಮಾಡಿಸುತ್ತಿದ್ದ ಆ ಉತ್ತಮಿ ಸ್ವರ್ಣಾಂಬಾಳ್, ಈಗ ಸೊಸೆಯಮೇಲೂ ತನ್ನ ಅಧಿಕಾರವನ್ನೂ ಛಲಾಯಿಸಿ ತನ್ನ ಸೇಡನ್ನು ತೀರಿಸಿಕೊಳ್ಳಲು

ತೊಡಗಿದಳು. ಸಾವಿರಗಟ್ಲೆ ಪದವೀಧರರು ಕೆಲಸವಿಲ್ಲದೆ ಅಲೆದಾಡುವ ಈ ಯುಗದಲ್ಲಿ ರಾಮಚಂದ್ರನಿಗೆ ಕೆಲಸ ಕೊಡಲು ಯಾರೂ ಕಾದಿರಲಿಲ್ಲ. ಅವನು ಕೆಲಸ ಹುಡುಕುತ್ತ ಹೋಗದ ಆಫೀಸುಗಳೂ ಇಲ್ಲ ಊರೂ ಇಲ್ಲ; ಅಪ್ಲಿಕೇಷನ್ ಬರೆದು ಬರೆದು ಟಪಾಲಿನ ಮೂಲಕ ಕಳುಹಿದುದಕ್ಕೂ ಕೆಲಸಕ್ಕಾಗಿ ಪ್ರಕಟನೆಗಳೂ ಯಾವುದಾದರೂ ಬಂದಿವೆಯೋ ಎಂದು ನೋಡಲು ಪತ್ರಿಕೆಗಳನ್ನುಕೊಂಡುದುದಕ್ಕೂ ಐವತ್ತು ರೂಪಾಯಿಗಳಿಗೂ ಹೆಚ್ಚಾಗಿ ಖರ್ಚಾಗಿರಬಹುದು. ಮೂವತ್ತು ಮೂವತ್ತೈದು ರೂಪಾಯಿಗಳ ಸಂಬಳದಲ್ಲಿ ಒಂದು ಗುಮಾಸ್ತೆಯ ಕೆಲಸ ಸಹ ಸಿಗಲಿಲ್ಲ. ದಿನವೆಲ್ಲಾ ಕೆಲಸಕ್ಕಾಗಿ ಅಲೆದಲೆದು ಅಕ್ಕೀಕಾಳಾಗಿ ಮನೆಗೆ ಹಿಂದಿರುಗಿದರೆ, ಸ್ವರ್ಣಾಂಬಾಳ್, “ಬಾರೋ, ಷೋಕಾಗಿ ತಿರುಗಿ ಬಿಟ್ಟು ಬಂದೆಯಾ, ಮಗನಿಲ್ಲದ ಆಸ್ತಿ ಇಲ್ಲಿ ರಾಶಿ ರಾಶಿ ಬಿದ್ದಿದೆಯಲ್ಲಾ ಉಣ್ಣಲು. ಲೇ, ಸೀತಾ ನಿನ್ನ ಪ್ರೀತಿಯ ಗಂಡನನ್ನು ಕುಳ್ಳಿರಿಸಿ, ಪಂಚಭಕ್ಷ್ಯ ಪರಮಾನ್ನಾದಿಗಳನ್ನು ಬಡಿಸು! ಪಾಪ! ಉದ್ಯೋಗ ಮಾಡಿ, ಸುಸ್ತಾಗಿ ಬಂದಿದ್ದಾನೆ!” ಎಂದು ಅವಹೇಳನದ ಸ್ವರದಲ್ಲಿ ಹಂಗರಿಸುವಳು. ರಾಮಚಂದ್ರನಿಗೆ ಬರುಬರುತ್ತ ಬಾಳ್ವೆಯಲ್ಲಿ ಜಿಗುಪ್ಸೆಯುಂಟಾಯಿತು. ಶಿವಶಂಕರಯ್ಯರ್‌ರೂ ಹುಡುಗನಿಗೆ ಕೆಲಸಕ್ಕಾಗಿ ಹಲವು ಗೆಳೆಯರನ್ನು ಕಂಡು ಕೇಳಿ ಕೇಳಿ ಬೇಸತ್ತಿದ್ದರು.

ಸಂಜೆ ಆರು ಘಂಟೆ ಇರಬಹುದು. ಶಿವಶಂಕರಯ್ಯರರು ಬೀದಿಯ ಜಗುಲಿಯಲ್ಲಿ ಕುಳಿತು ತಮಿಳು ಪತ್ರಿಕೆಯೊಂದನ್ನು ತಿರುವುತ್ತಿದ್ದರು. ಸ್ವರ್ಣಾಂಬಾಳ್ ರಾಮಜಪ ಮಾಡುತ್ತ ಬತ್ತಿ ಹೊಸೆಯುತ್ತ ಕುಳಿತಿದ್ದಳು. ಸೀತಾ ಒಳಗೆ ಅಡಿಗೆ ಮಾಡುತ್ತ “ದೇವರೇ! ಅವರನ್ನು ಇನ್ನೆಷ್ಟು ದಿನ ಹೀಗೆ ಕಾಡುವೆ? ಈ ಹೊತ್ತು ಬೆಳಿಗ್ಗೆ ಅಷ್ಟು ಹೊತ್ತಿಗೆ ಹೊರಗೆ ಹೋದವರು ಹಗಲು ಊಟಕ್ಕೆ ಸಹ ಬರಲಿಲ್ಲವಲ್ಲಾ. ಊಟ ನಿದ್ರೆ ಬಿಟ್ಟು ಅಲೆದರೂ ಕೂಡ ಒಂದು ಕೆಲಸ ಸಿಗಲೊಲ್ಲದಲ್ಲಾ. ಈ ಮನೆಯ ಹೊಸಲು ಮೆಟ್ಟುವಾಗಲೇ ಬೈಗಳ ಮಳೆ ಕೇಳಬೇಕಾಗಿದೆಯಲ್ಲಾ!........” ಎಂದು ಪೇಚಾಡಿದಳು. ಅಗೋ ಬಂದಂತಿದೆ. ಬೀದಿಯ ಬಾಗಿಲಲ್ಲಿ ಮಾತುಕತೆ ಕೇಳಬರುತ್ತದೆ. ಕೊಂಚ ಕಾಫಿಯಾದರೂ ಬಿಸಿ ಮಾಡುತ್ತೇನೆ. ಎಂದು

ಕಾಫೀ ಬೆರೆಸಿ ಒಲೆಯಮೇಲಿಟ್ಟು ಕೈಕಾಲು ತೊಳೆಯಲು ತಂಬಿಗೆಯಲ್ಲಿ ನೀರು ತೆಗೆದಿಡಲು ಬಚ್ಚಲ ಮನೆಗೆ ಹೋದಳು.

ಹಗಲೆಲ್ಲ ಅಲೆದಲೆದು ಸುಸ್ತಾಗಿ ಮನೆಗೆ ಬಂದನು ರಾಮಚಂದ್ರ. ಅವನನ್ನು ಕಂಡ ಐಯ್ಯರು "ಏನೋಪ್ಪಾ ಮಗೂ! ಈ ಹೊತ್ತು ಮಧ್ಯಾಹ್ನ ಊಟಕ್ಕೆ ಸಹ ಬರಲಿಲ್ಲವಲ್ಲಾ. ಕೆಲಸ ಏನಾದರೂ ಸಿಕ್ಕಿತೇ? ಏನು ಸಂಗತಿ? ಮೊದಲು ಹೋಗಿ ಕೈಕಾಲು ತೊಳೆದು, ಕೊಂಚ ಕಾಫಿ ಯಾದರೂ ಕುಡಿದು ಬಾ" ಎಂದು ಪ್ರಿಯವಾಗಿ ನುಡಿದರು.

ಸ್ವರ್ಣಾಂಬಾಳ್ "ಮನೆಗೆ ಊಟಕ್ಕೆ ಬರದಿದ್ದರೆ ನಿಮ್ಮ ಸೋದರಳಿಯ ಉಪವಾಸ ಬಿದ್ದಿದ್ದನೆಂದು ಅಂದುಕೊಂಡಿರುವರೇನು? ಬೆಳಿಗ್ಗಿನಿಂದ ಕೊನೆಯ ಪಕ್ಷ ನಾಲ್ಕು ಸಲವಾದರೂ ಹೋಟಲಿಗೆ ಹೋಗಿ ತಿಂದಿರಬಹುದು. ಈ ಮನೆಯಲ್ಲೇ ಮತ್ತೆ ಮಕ್ಕಳಿಲ್ಲದ ಆಸ್ತಿ ಕೊಳೇ ಹೋಗುತ್ತಿದೆಯಲ್ಲಾ. ತೀಂಡಿಪೋತ ಧಾಂಡಿಗನೊಬ್ಬ ಸಾಲದೆಂದು ಅವನ ಕುತ್ತಿಗೆಗೆ ಮತ್ತೊಂದು ಅರಿಷ್ಟವನ್ನು ಕಟ್ಟಿದ್ದೀರಿ. ಇನ್ನು ಏನು ಕೊರತೆ? ಎರಡೂ ಸೇರಿ ಮನೆಯನ್ನು ತೊಳೆದು ಬಿಡಲಿ. ನಾವಿಬ್ಬರೂ ದೇಶಾಂತರ ಹೋಗೋಣ ಬನ್ನಿ. ನಮ್ಮ ಮನೆ ಮತ್ತೆ ಛತ್ರವಾಗಿ ಬಿಟ್ಟಿದೆಯಲ್ಲಾ" ಎಂದು ಉರಿದುಬಿದ್ದರು.

ಶಿವಶಂಕರಯ್ಯರ್ "ಹೋಗೇ, ದಡ್ಡಿ ಇದೆಲ್ಲ ಎಂತಹ ಮಾತು? ಎದ್ದು ಹೋಗಿ ತಿಂಡೀಗಿಂಡೀ ಏನಾದರೂ ಇದ್ದರೆ ಕೊಡು." ಮಗುವಿಗೆ ಎಂದಂದರು.

ಸ್ವರ್ಣಾಂಬಾಳ್, "ಹೌದೌದು. ಪುಟಾಣಿ ಮಗು! ಲಕ್ಷಣವಾಗಿ ಹೊತ್ತು ಹೆತ್ತ ಸಾಕಿ ಸಲಹಿದ ಮಗು. ಊರಲ್ಲಿ ಅಲೆಯುವ ತಬ್ಬಲಿಯನ್ನು ತಂದು ಮನೆಯಲ್ಲಿಟ್ಟುಕೊಂಡು, ಮಗುವೆಂದು ನೆಂಟತನ ಕೊಂಡಾಡಿ" ಎಂದು ವ್ಯಂಗ್ಯವಾಗಿ ನುಡಿಯುತ್ತ ಅಲ್ಲಿಂದ ಎದ್ದು ಕಟ್ಟೆಯಿಂದ ಇಳಿದು ನೆರೆಮನೆಯ ಪಾರ್ವತಿಯ ಹತ್ತಿರ ಹರಟೆಕೊಚ್ಚಲು ಹೊರಟು ಹೋದಳು. ಆ ಸಮಯ ಶಿವಶಂಕರಯ್ಯರ ಗೆಳೆಯರಾದ ಸುಬ್ರಹ್ಮಣ್ಯ ಘನಪಾಟಿಗಳು ಐಯ್ಯರನ್ನು ಹುಡುಕಿಕೊಂಡು ಬರಲು ಇಬ್ಬರೂ ಅಲ್ಲಿಯೇ ಕುಳಿತು ಹರಟೆಯಲ್ಲಿ ತಲ್ಲೀನರಾದರು.

ಒಳಬಂದ ರಾಮಚಂದ್ರನು ತನ್ನ ಸೋದರತ್ತೆಯ ಕಟುನುಡಿಗಳನ್ನು ಕೇಳಿ ಬೆರಗುಗೊಂಡು ನಿಂತನು. ಅವಳ ಒಂದೊಂದು ಮಾತೂ ಅವನ ನೊಂದ ಹೃದಯವನ್ನು ಶೂಲದಂತೆ ತಿವಿಯಿತು. ಅವನು ಕೆಲಸಕ್ಕಾಗಿ ಪಡುವ ಪಾಡು ಈಶ್ವರನಿಗೇ ಗೊತ್ತು; ಸ್ವರ್ಣಾಂಬಾಳಿಗೆ ಏನು ಗೊತ್ತು ? " ಛೇ! ಈ ಮನೆಯಲ್ಲಿ ಇನ್ನೂ ಕ್ಷಣ ಸಹ ನಿಲ್ಲಬಾರದು. ಇವರಾಗಿಯಲ್ಲವೇ ನನಗೆ ಮದುವೆ ಮಾಡಿದರು, ಇಷ್ಟವಿದ್ದರೆ ಅವಳಿಗೆ ಊಟ ಹಾಕಲಿ, ಇಲ್ಲವಾದರೆ ತೌರುಮನೆಗೆ ಕಳುಹಿಸಲಿ. ನನ್ನಿಂದ ಅನ್ನ ಹಾಕಲು ಸಾಧ್ಯವಾದಾಗ ಅವಳನ್ನು ನನ್ನೆಡೆಗೆ ಕರೆದುಕೊಂಡು ಹೋಗುವೆನು. ಈಗ ಅವಳಿಗೆ ಈ ವಿಷಯ ತಿಳಿಸಿದರೆ ಬಹಳು ನೊಂದುಕೊಳ್ಳುತ್ತಾಳೆ, ಪಾಪ. ನಾನೀಗ ಯಾರಿಗೂ ತಿಳಿಯದಂತೆ ಹೊರಟು ಹೋಗುವುದೇ ಒಳಿತು. ಈ ಮನೆಯಲ್ಲಿ ಇನ್ನು ಒಂದು ಹಿಡಿ ಅನ್ನ ಊಟ ಮಾಡುವುದಕ್ಕಿಂತ ಆತ್ಮಹತ್ಯ ಮಾಡಿಕೊಳ್ಳುವುದೇ ಮೇಲು " ಎಂದು ಆಲೋಚಿಸುತ್ತ ಹಿತ್ತಲ ಬಾಗಿಲಿನಿಂದ ಹೊರಬಿದ್ದನು. ತಾನು ಹೊರಟು ಹೋಗುವುದಕ್ಕೆ ಮೊದಲು ತನ್ನ ಪ್ರೇಯಸಿಯನ್ನು ಒಮ್ಮೆ ಕಂಡು ಮಾತನಾಡಬೇಕೆಂಬ ಹೆಬ್ಬಯಕೆ, ಅವನಿಗೆ. ಅವನ ಮನಸ್ಸು ಅವಳ ಅಗಲಿಕೆಯನ್ನು ಸಹಿಸಲಾರದೆ ಮರುಗಿತು. ಆದರೆ....ಆದರೆ ಮರುಕ್ಷಣ, ಮನಸ್ಸು ಗಟ್ಟಿಮಾಡಿಕೊಂಡು ಅಬಲೆ ಸೀತೆಯನ್ನು ಕಾಪಾಡುವಂತೆ ಭಗವಂತನನ್ನು ಪ್ರಾರ್ಥಿಸಿ ಹೊರಬಿದ್ದನು.

ಸೀತೆಯಂತೂ ಕಾಫೀ ಬಿಸಿಮಾಡಿಟ್ಟುಕೊಂಡು ಗಂಡನ ಬರುವಿಕೆಯನ್ನು ನಿರೀಕ್ಷಿಸುತ್ತ ಅಡಿಗೆಯ ಮನೆಯಲ್ಲಿಯೇ ನಿಂತಿದ್ದಳು. ಅವಳಿಗೆ ಒಂದೊಂದು ನಿಮಿಷವೂ ಒಂದೊಂದು ಯುಗದಂತೆ ಪರಿಣಮಿಸಿತು ಮೆಲ್ಲಗೆ ನಡುಮನೆಗೆ ಬಂದು ಬೀದಿಯ ಕಡೆ ಇಣಿಕಿ ನೋಡಿದಳು. ಅಲ್ಲಿ ಐಯ್ಯರು ಮತ್ತು ಘನಪಾಟಿಗಳ ಹೊರತಾಗಿ ಇನ್ನಾರೂ ಇರಲಿಲ್ಲ. ಮನೆಯೆಲ್ಲ ಸುತ್ತಿ ನೋಡಿದಳು. ಗಂಡನೆಲ್ಲೂ ಕಾಣಿಸಲಿಲ್ಲ. " ಅವರು ಬಂದರೆಂದು ತಾನು ಅಂದುಕೊಂಡುದೇ ತಪ್ಪಿರಬಹುದು, ಅತ್ತೆಯವರು. ಬೇರೆ ಯಾರನ್ನೋ ಬೈಯುತ್ತಿದ್ದರೋ ಏನೋ ಕಾಣೆ ಎಂದು ಮನಸ್ಸಿಗೆ ಸಮಾಧಾನ ತಂದುಕೊಂಡಳು.

ಘಂಟೆ ಏಳು ಹೊಡೆಯಿತು. ಸೀತೆಯ ಮನಸ್ಸು ಬಹುವಾಗಿ ಕಳವಳ ಗೊಂಡಿತು. ತನಗೆ ಯಾವುದೋ ಒಂದು ಕೆಡುಕು ಸಂಭವಿಸಲಿರುವಂತೆ ಅವಳ ಮನಸ್ಸಿಗೆ ಭಾಸವಾಯಿತು. ಆ ಅರಿಯದ ಹುಡುಗಿಗೆ ಆ ಸಮಯ ಸಮಾಧಾನ ಹೇಳುವವರು ಯಾರಿರುವರು? ಪಾಪ, ಅಷ್ಟೊಂದು ಸಂಕಟದಲ್ಲಿಯೂ ಕೂಡ ಮನೆ ಕೆಲಸಗಳನ್ನು ಅಚ್ಚುಕಟ್ಟಾಗಿ ಮಾಡಿ ಮುಗಿಸಿದಳು. ಮುದುಕರಿಗೆ ಸಂಧ್ಯಾವಂದನೆಗೆ ನೀರು ತೆಗೆದಿಟ್ಟು, ಮಣೆ ಹಾಕಿ, ಊಟಕ್ಕೆ ಎಲ್ಲರಿಗೂ ಎಲೆಹಾಕಿ, ಅಡಿಗೆಯ ಮನೆಯನ್ನು ಚೊಕ್ಕಟ ಮಾಡಿ, ದೇವರಿಗೆ ದೀಪ ಹಚ್ಚಿಟ್ಟು ನಮಸ್ಕಾರ ಮಾಡಿದಳು. ಪರಾಶಕ್ತಿ, ಪರಮೇಶ್ವರೀ, ತಾಯೇ! ಅವರಿಗೆ ಬೇಗ ಒಂದು ಒಳ್ಳೆಯ ಉದ್ಯೋಗ ಸಿಗುವಂತೆ ಕರುಣಿಸು, ನಿನಗೆ ಹತ್ತು ತೆಂಗಿನ ಕಾಯಿಗಳು ಒಡೆಯುತ್ತೇನೆ. ಕುಂಕುಮಾರ್ಚನೆ ಮಾಡುತ್ತೇನೆ. ನಮ್ಮನ್ನು ಕಾಪಾಡು ತಾಯೇ! ಅವರು ಹಗಲಿರುಳೂ ಎಡೆಬಿಡದೆ ಕೆಲಸಕ್ಕಾಗಿ ಅಲೆದಾಡುವುದನ್ನು ಕಂಡು ನನಗೆ ಹೆಚ್ಚಿನ ದುಃಖವಾಗುತ್ತಿದೆ ಇನ್ನು ಎಷ್ಟುದಿನ ಈ ಮನೆಯಲ್ಲಿ ಕುಳಿತು ಇವರಿಗೆಲ್ಲ ಹೊರೆಯಾಗಿರಬೇಕು? ಬೇಗ ಇವರಿಗೆ ಕೆಲಸ ಸಿಕ್ಕರೆ ಇಷ್ಟೊಂದು ಕಾಲ ನಮಗೆ ಅನ್ನ ಹಾಕಿದ ಮಾಮನವರಿಗೆ ಶುಶ್ರೂಷೆಮಾಡಿ ಧನ್ಯರಾಗಬಹುದು. ಭವಾನೀ ನಾವು ಬೇಕು ಬೇಕೆಂದು ಇವರಮನೆಯಲ್ಲಿ ಕುಳಿತಿಲ್ಲ, ಕೆಲಸಕ್ಕಾಗಿ ಇವರು ಅಲೆಯುತ್ತಿರುವುದು ನಿನಗೆಗೊತ್ತಿಲ್ಲದ ವಿಷಯವೇ...." ಈ ರೀತಿಯಾಗಿ ದೇವಿಯನ್ನು ಪರಿಪರಿಯಾಗಿ ಪ್ರಾರ್ಥಿಸಿದಳು.

ವಯೋಧಿಕರು ಘನಪಾಟಿಗಳನ್ನು ಕಳುಹಿಕೊಟ್ಟು ಮನೆಯೊಳಗೆ ಬಂದು, "ರಾಮೂ ರಾಮೂ" ಎಂದು ಎರಡು ಸಲ ಕರೆದರು. ಉತ್ತರವಿಲ್ಲ. ಸರಿ, ದಿನವೆಲ್ಲ ಅಲೆದು ಬಂದಿದ್ದಾನೆ ಮಗು. ವಿಶ್ರಮಿಸಿಕೊಳ್ಳಲಿ, ಪಾಪ " ಎಂದುಕೊಂಡು, ತಯಾರಾಗಿ ಅಂಗಳದಲ್ಲಿಟ್ಟಿದ್ದ ತಂಬಿಗೆಯ ನೀರಿನಿಂದ ಕೈಕಾಲು ತೊಳೆದು ಬಂದು, ಸಂಧ್ಯಾವಂದನಕ್ಕೆ ಕುಳಿತರು. ಸಂಧ್ಯಾವಂದನೆ ಮುಗಿಯುತ್ತಲು " ಅಮ್ಮಾ, ಸೀತಾ! ರಾಮುವನ್ನೂ ಊಟಕ್ಕೆ ಕರೆ. ಮಧ್ಯಾಹ್ನ ಊಟ ಸಹ ಮಾಡದೆ ಹಸಿದಿದ್ದಾನೆ. ಅವಳನ್ನೂ ಇನ್ನೂ ಕಾಣಲಿಲ್ಲ. ಪಾರ್ವತಮ್ಮನ ಮನೆಗೆ ಹೋದಳೆಂದರೆ ಅವಳಿಗೆ ಹೊತ್ತು ಹೋದದ್ದೇ ತಿಳಿಯುವುದಿಲ್ಲ " ಎಂದರು.

ದೇವಿಯ ಧ್ಯಾನದಲ್ಲಿ ಮಗ್ನಳಾಗಿದ್ದ ಸೀತೆ, ಐಯ್ಯರ ಮಾತು ಕೇಳಿ, ಎಚ್ಚೆತ್ತು ಎದ್ದುನಿಂತು ಮೆಲುದನಿಯಲ್ಲಿ "ಅವರಿನ್ನು ಮನೆಗೆ ಬಂದಿಲ್ಲವಲ್ಲ" ಎಂದಳು.

ಅದೇ ತಾನೇ ಮನೆಯೊಳಗೆ ಪ್ರವೇಶಿಸಿದ ಸ್ವರ್ಣಾಂಬಾಳಿನ ಕಿವಿಗೆ ಈ ಮಾತು ಕೇಳಿಸಿತು. ಕೂಡಲೇ, ಪುನಃ ಊರು ಸುತ್ತಲು ಹೊರಟು ಹೋದನೇ ? ಅನಿಷ್ಟ. ಬರುಬರುತ್ತಾ ಇವನ ನಡತೆಯೇ ನನಗೆ ಸರಿ ಬೀಳಲಿಲ್ಲ, ಹೋಗೀಂದ್ರೆ. ಹೇಳಲು ಹೋದರೆ ನಾನು ಕೆಟ್ಟವಳು........" ಎಂದು ಪ್ರಾರಂಭಿಸಿದಳು.

ಐಯ್ಯರು ನಡುವೆ ಮಾತೆತ್ತಿ "ಸಾಕುಮಾಡು, ನಿನ್ನ ಮಾತನ್ನು. ಅವನು ಬಂದು ಮನೆಯೊಳಗೆ ಕಾಲಿಡುವುದರೊಳಗಾಗಿಯೇ ಬಾಯಿಗೆ ಬಂದಂತೆ ನೀನಂದೆ. ಮುನಿಸಿಕೊಂಡು ಎಲ್ಲಿಗೆ ಹೋದನೋ ಸಾಲದುದಕ್ಕೆ ಉಪವಾಸ ಬೇರೆ, ಪಾಪ" ಎಂದನ್ನುತ್ತ ಮನೆಯಿಂದ ಎದ್ದು ಬೀದಿಯ ಬಾಗಿಲಿಗೆ ಹೋದರು. ಸೀತಾ ಏನೊಂದೂ ಅರ್ಥವಾಗದೆ ಪೆಚ್ಚುಮೋರೆ ಹಾಕಿಕೊಂಡು ನಿಂತಳು.

ಸ್ವರ್ಣಾಂಬಾಳ್ ಗಂಡನನ್ನು ಹಿಂಬಾಲಿಸುತ್ತ, "ಮಾತೆತ್ತಿದರೆ ನನ್ನ ಮೇಲೆ ದೋಷಾರೋಪಣೆ ಮಾಡುವುದೊಂದೇ ಕೆಲಸ, ನಿಮಗೆ. ಹಾಗೆ ಅವನಿಗೆ ಹೋಗಲು ಜಾಗವೆಲ್ಲಿದೆ? ಕತ್ತೆಗೆ ಹಾಳುಬಿದ್ದ ಗೋಡೆಯೇ ಸ್ಥಳ ! ಎಲ್ಲಿ ಹೋದ ದಾರಿಯಲ್ಲೇ ಹಿಂದಿರುಗಿ ಬರುತ್ತಾನೆ, ನೋಡುತ್ತೀರಿ ! ನೀವು ಈ ಕತ್ತಲೆಯಲ್ಲಿ ಹುಡುಕುತ್ತ ಹೋಗುವುದೆಂದರೆ ಏನು ?" ಎಂದು ದಾರಿ ಅಡ್ಡಗಟ್ಟಿದಳು.

"ದೂರ ಸರಿ, ಕತ್ತೆ ನಿನ್ನಿಂದಲೇ ಈ ಗಲಾಟೆ" ಎಂದು ಘರ್ಜಿಸುತ್ತ ಹೊರಗೆ ಹೊರಟು ಹೋದಳು.

ಒಳಬಂದ ಸ್ವರ್ಣಾಬಾಳ್ ಸೀತಾಲಕ್ಷ್ಮಿಯನ್ನು ಬಾಯಿಗೆ ಬಂದಂತೆ ಬೈದಳು. ಆ ಮುಗ್ಧ ಹುಡುಗಿ ಗಂಡನು ಎಲ್ಲಿಗೋ ಹೋದನಲ್ಲಾ ಎಂದು ಅಳಬೇಕೆ ? ............ ಸ್ವರ್ಣಾಂಬಾಳಿನ ಬೈಗಳನ್ನು ತಾಳಲಾರದೇ ದುಃಖಿಸಬೇಕೆ ?............ ಅವಳ ಪಾಡು ಬಹಳ ಪರಿತಾಪಕರವಾಗಿತ್ತು.

" ಇದೇನೇ ಇದು ಅವಲಕ್ಷಣ ? ಶುಕ್ರವಾರ ಸಂಜೆ ದೀಪ ಹೊತ್ತಿಸುವ

ಹೊತ್ತಿನಲ್ಲಿ ಅಳುವುದನ್ನು ನೋಡುವ ಪೀಡೆ! ನನಗೇನಂತೆ, ಹೇಗಾದರೂ ಹಾಳಾಗಿ........ಅಷ್ಟು ದೊಡ್ಡ ಧಾಂಡಿಗನನ್ನು ಹುಡುಕಿಕೊಂಡು ಕತ್ತಲಲ್ಲಿ ಹೀಗೆ ಯಾರಾದರೂ ಹೋಗುವುದುಂಟೇ? ಹೋದವನಿಗೆ ಮನೆಗೆ ಹಿಂದಿರುಗಲು ದಾರಿ ತಿಳಿಯದೇನು? ಎರಡು ದಿನ ಉಪವಾಸ ಬಿದ್ದರೆ ಬುದ್ಧಿ ಬರುತ್ತದೆ. ತನ್ನಷ್ಟಕ್ಕೇ ಹಿಂತಿರುಗಿ ಬರುತ್ತಾನೆ. ಇವನನ್ನು ಸಾಕಿ ಸಲಹಿ ಓದಿಸಿ ಮುಂದಕ್ಕೆ ತಂದುದಕ್ಕೆ ಪ್ರತ್ಯುಪಕಾರವಾಗಿ ಈ ಅನಿಷ್ಟವನ್ನು ತಂದು ನಮ್ಮ ಕಾಲಿಗೆ ಕಟ್ಟಿ ಓಡಿ ಹೋದನಲ್ಲಾ ಪ್ರಾರಬ್ಧ. ಈ ಮುದುಕರನ್ನು ಹೀಗೆ ಕಾಡಿಸಿದರೆ ಆ ಪಾಪ ಇವನನ್ನು ಸುಮ್ಮನೆ ಬಿಡುವುದೇ............ ಎಂದು ಗೊಣಗುತ್ತ ಜೋಕಾಲೆಯಲ್ಲಿ ಕುಳಿತು ಜೀಕತೊಡಗಿದಳು.

ತಮ್ಮ ಗೆಳೆಯರು ಕೆಲವರನ್ನು ಜೊತೆಗೆ ಕರೆದುಕೊಂಡು ಶಿವಶಂಕರಯ್ಯರು ಅಗ್ರಹಾರವೆಲ್ಲಾ ರಾಮಚಂದ್ರನನ್ನು ಹುಡುಕಿದರು. ಊರಲ್ಲಿರುವ ಭಾವಿ ಕೊಳ ಒಂದು ಬಾಕಿ ಇಲ್ಲದೆ ಹುಡುಕಿ ನೋಡಿದುದಾಯಿತು. ಯಾರನ್ನು ಕೇಳಿ ನೋಡಿದರೂ ಕೂಡ ಅವನನ್ನು ಕುರಿತ ವಿಷಯವಾವುದೂ ತಿಳಿಯಲಿಲ್ಲ. ರಾತ್ರಿ ಹನ್ನೊಂದು ಘಂಟೆಯ ಸುಮಾರಿಗೆ ಐಯ್ಯರು 'ಬುಸ್, ಬುಸ್' ಎಂದು ತೇಕುತ್ತ ಮನೆಗೆ ಬಂದು ಸೇರಿದರು. ಸ್ವರ್ಣಾಂಬಾಳ್, "ಆಗಲೇ ನಾನು ಹೇಳಲಿಲ್ಲವೇನು? ಚಿಕ್ಕ ಮಗುವೇನು, ಹುಡುಕುವುದಕ್ಕೆ? ಎರಡು ದಿನ ಕಳೆದರೆ ತನ್ನಷ್ಟಕ್ಕೇ ಹಿಂದಿರುಗಿ ಬರುತ್ತಾನೆ. ಬನ್ನಿ, ಒಂದು ತುತ್ತು ಊಟ ಮಾಡೋಣ" ಎಂದು ಬಹಳ ಆದರದಿಂದ ಕರೆದಳು.

ಐಯ್ಯರ್ "ನಿನ್ನ ಉಪಚಾರವೋ, ನಿನ್ನ ಮುಖವೋ? ನನಗೆ ಊಟವೂ ಬೇಡ, ನೀರೂ ಬೇಡ, ನೀನು ಬೇಕಾದರೆ ಹೊಟ್ಟೆ ಬಿರಿಯುವಂತೆ ಊಟ ಮಾಡು, ಹೋಗು" ಎಂದು ರೇಗಾಡಿಬಿಟ್ಟರು. ಕೊಂಚ ಸುಧಾರಿಸಿಕೊಂಡು "ಆ ಹುಡುಗಿ ಏನು ಮಾಡುತ್ತಿದ್ದಾಳೆ?" ಊಟ ಮಾಡಿದಳೇ? ಎಂದು ಕೇಳಿದರು.

ಸ್ವರ್ಣಾಂಬಾಳ್ ಮುಖಸಿಂಡರಿಸಿಕೊಂಡು "ಮನೆ ಹಾಳಾದಂತೆ ಅಳುತ್ತ ಮಲಗಿದ್ದಾಳೆ. ನಾನೆಷ್ಟೋ ಅಂಗಲಾಚಿ ಬೇಡಿದೆ. ಊಟ ಮಾಡುವುದಿಲ್ಲವೆನ್ನುತ್ತಾಳೆ. ಹ್ಯಾಗೋ ಹೋಗಿ. ನನಗೂ ಊಟ ಬೇಡ"

ಎಂದೆಂದು ಹಾಸಿಗೆ ಹಾಸಿಕೊಂಡು ರಭಸದೊಡನೆ ದೊಪ್ಪನೆ ಕುಳಿತು ಮಲಗಿಕೊಂಡಳು.

೨

ದಿನಗಳು ವಾರಗಳಾಗಿಯೂ, ವಾರಗಳು ತಿಂಗಳುಗಳಾಗಿಯೂ ಉರುಳಿದುವು. ಆದರೂ ಕೂಡ ರಾಮಚಂದ್ರನ ವಿಷಯವಾಗಿ ಯಾವ ಸಮಾಚಾರವೂ ತಿಳಿಯಲಿಲ್ಲ. ಸೀತೆ ದಿನದಿನಕ್ಕೆ ದುಃಖ ತಾಳಲಾರದೆ ಕೃಶಳಾಗುತ್ತಿದ್ದಳು, ಸ್ವರ್ಣಾಂಬಾಳಿನ ಹಿಂಸೆಯನ್ನು ಅವಳಿಂದ ತಡೆಯಲಾಗಲಿಲ್ಲ. ತನ್ನ ಪ್ರೀತಿಯ ಸಾಕು ಮಗನ ಅಗಲಿಕೆಯನ್ನು ಸಹಿಸಲಾರದ ಮುದುಕರು, ಸೊಸೆಯ ದುಡಿತವನ್ನೂ ದುರದೃಷ್ಟವನ್ನೂ ಕಂಡು ಮತ್ತಷ್ಟು ಮರುಗಿದರು. ಆದುರ್ಭರದೇಹವು ಯಾತನೆಗಳನ್ನೆಲ್ಲ ಅನುಭವಿಸಲಾರದೆ ಕೊರಗುತ್ತ ಬಂದು, ಎರಡೇ ತಿಂಗಳಲ್ಲಿ ಸ್ವರ್ಗಸ್ಥರಾದರು.

ಅಬಲೆ ಸೀತೆಗೆ ಒಂದೇ ಆಧಾರವಾಗಿದ್ದ ಶಿವಶಂಕರಯ್ಯರ್ ಮರಣ ಹೊಂದಲು, ಸಮುದ್ರದ ಸುಳಿಯಲ್ಲಿ ಸಿಲುಕಿದ ಹಡಕಿನಂತೆ, ಸ್ವರ್ಣಾಂಬಾಳ ಕೈಯಲ್ಲಿ ಸಿಕ್ಕಿ ಪರಿತಪಿಸಿದಳು. ಸೀತೆ, ಐದನೇಯ ಫಾರಂವರೆವಿಗೂ ಓದಿದ್ದಳು. ಚಿತ್ರ ಬರೆಯುವುದರಲ್ಲೂ ಕಸೂತಿ ಕೆಲಸದಲ್ಲೂ, ಸಂಗೀತ ದಲ್ಲೂ ಜಾಣೆ. ಪಾಠಶಾಲೆಯಲ್ಲಿ ಇಂತಹ ಲಲಿತ ಕಲೆಗಳಲ್ಲಿ ಅವಳಿಗೆ ಅನೇಕ ಸಲ ಮೊದಲನೇ ಬಹುಮಾನಗಳು ಸಿಕ್ಕಿದ್ದವು ಈ ಕಲೆಗಳಲ್ಲಿ ಅವಳಿಗಿದ್ದ ಆ ಹುಚ್ಚು ಅವಳನ್ನು ಇನ್ನೂ ಬಿಟ್ಟಿರಲಿಲ್ಲ. ವಿರಾಮ ಕಾಲದಲ್ಲಿ ಏನಾದರೂ ಹೊಲಿಯುತ್ತ ಕುಳಿತಿರುವಳು. ಸಧಾ ಕಾಲವೂ ತನ್ನ ಪತಿಯನ್ನು ತನ್ನೆಡೆಗೆ ಬೇಗ ಸೇರಿಸಬೇಕೆಂದು ಚಾಮುಂಡೇಶ್ವರಿಯನ್ನು ಪ್ರಾರ್ಥಿಸುತ್ತಲಿರುತ್ತಿದ್ದಳು. ಮತ್ತೆ ಕೆಲವೇಳೆ ಚಿತ್ರ ಬರೆಯುವುದರಲ್ಲಿ ತನ್ನ ವ್ಯಸನವನ್ನೂ, ಆಯಾಸವನ್ನೂ ಮರೆಯುತ್ತಿದ್ದಳು. ಕೆಲ ಸಮಯ ಏನಾದರೊಂದು ಒಳ್ಳೆಯ ಪುಸ್ತಕವನ್ನು ಓದುತ್ತ ಕಾಲನೂಕುತ್ತಿದ್ದಳು. ಅದನ್ನು ಕಂಡರೆಂದರೆ ಸ್ವರ್ಣಾಂಬಾಳ್ ದುರ್ಗಾವತಾರ ತಾಳುತ್ತಿದ್ದರು. "ಇದೇನೇ ಇದು! ಸೂಳೆಯಂತೆ! ಒಲೆ ಊದುವ ಹೆಣ್ಣು ಜನ್ಮಕ್ಕೆ ಚಿತ್ರ ಬರೆಯದಿದ್ದರೆ ಕೊರತೆಯೇ? ಹೊತ್ತು ಹೋಗದಿದ್ದರೆ

ಹೋಗಿ ಆ ಮಡಕೆಯ ಹುಣಿಸೆಯ ಹಣ್ಣನ್ನೆಲ್ಲ ಬಿಡಿಸಿಡು. ಒಂದು ಉಪಯೋಗವಾದ ಕೆಲಸವಾದರೂ ಮುಗಿಸಿದಂತಾಗುವುದು ಒಂದಿಷ್ಟು ಎಲೆ ಹಚ್ಚಿದರೂ ಆಯಿತು. ನೀನು ಬರೆದ ಚಿತ್ರಪಟಗಳನ್ನು ತೂಗ ಹಾಕಲಿಲ್ಲವಲ್ಲಾ ಎಂದು ನಮ್ಮ ಮನೆಯ ಗೋಡೆಗಳು ಅಳಲಿಲ್ಲ" ಎಂದು ಮಾತಿನ ಸರಣಿ ಜೋಡಿಸುವರು. ಆಗ ಆ ಹುಡುಗಿ, ಭಯಂಕರ ಹುಲಿಯನ್ನು ಕಂಡು ಹೆದರಿದಜಿಂಕೆಯಂತೆ, ಥರಥರನೆ ನಡುಗುವಳು. ತಕ್ಷಣ ತನ್ನ ಕೆಲಸವನ್ನುಅಷ್ಟಕ್ಕೇ ನಿಲ್ಲಿಸಿ ಸ್ವರ್ಣಾಂಬಾಳಿನ ಅಪ್ಪಣೆಯಂತೆ ಮನೆಯ ಕೆಲಸವನ್ನು ಮಾಡಲು ತೊಡಗುವಳು. ಇಂತಹ ಸಂಭವಗಳು ಜರುಗದ ದಿನವೇ ಇಲ್ಲ.

ಸೀತೆ ತನ್ನಗಂಡನು ಇರುವ ಸ್ಥಳ ತಿಳಿಯದೆ ಪರಿತಪಿಸಿದಳು. ಗಂಡನ ಕ್ಷೇಮ ಸಮಾಚಾರವಾವುದೂ ತಿಳಿಯದೆ ಹಗಲಿರಳೂ ಚಿಂತಿಸಿ ಚಿಂತಿಸಿ ಸೊರಗಿಹೋದಳು. ಮತ್ತು ರಾಮಚಂದ್ರ ಅವಳನ್ನೂ ಅಗಲಿದ ಸಮಯ ಅವಳು ಎರಡು ತಿಂಗಳ ಗರ್ಭಿಣಿ. ಅದರ ಜೊತೆಗೆ ಮನೋವೇದ ನೆಯೂ ಸೇರಿಕೊಳ್ಳಲು, ಮಿತಿಮೀರಿದ ಕೆಲಸದಿಂದ ಆ ಹುಡುಗಿ ಬಿರುಗಾಳಿ ಮಳೆಗೆ ಸಿಕ್ಕಿ, ಬಳಲಿ ಬತ್ತಿಹೋದ ಎಳೆಬಾಳೆಯ ಕಂದಿನಂತೆ ಕೃಶಳಾದಳು. ಆ ಹುಡುಗಿ ಸಕಲ ಸದ್ಗುಣ ಸಂಪನ್ನೆ. ಅವಳ ಅಜ್ಜ ರಾಮಾಶಾಸ್ತ್ರಿಗಳು ಮಹಾ ಪಂಡಿತರು. ಹುಡುಗಿಯನ್ನು ಬಹಳ ಚೆನ್ನಾಗಿ ತರಬೇತು ಮಾಡಿದ್ದರು. ಆದುದರಿಂದಲೇ ಆ ಹುಡುಗಿ ಅಷ್ಟೊಂದು ಕಷ್ಟ ನಿಷ್ಠೂರಗಳನ್ನೂ ಭೂಮಿದೇವಿಯಂತೆ ಸಹಿಸಿಕೊಳ್ಳುತ್ತಿದ್ದಳಿನ್ನಿ.

ಒಂದು ದಿನ ಮಧ್ಯಾಹ್ನ ಸ್ವರ್ಣಾಂಬಾಳ್ ಐನೂರು ಹಪ್ಪಳಕ್ಕೆ ಹಿಟ್ಟು ಕಲೆಸಿ ಮುಚ್ಚಿಟ್ಟು,ಅದನ್ನುಕುಟ್ಟಿ ಉಂಡೆ ಮಾಡಿ ಹಪ್ಪಳ ಲಟ್ಟಿಸಿಡು ಎಂದು ಸೀತೆಗೆ ಅಪ್ಪಣೆಯಿತ್ತು, ಪಾರ್ವತಿಯ ಮನೆಗೆ ಹರಟೆ ಕೊಚ್ಚಲು ಹೊರಟುಹೋದಳು. ಆರುತಿಂಗಳ ಗರ್ಭಿಣಿ ಹುಡುಗಿ ಅಷ್ಟೊಂದು ಹಿಟ್ಟನ್ನೂ ಕುಟ್ಟಿ ಉಂಡೆ ಮಾಡಿಟ್ಟು ಮಣೆಯನ್ನೂ, ಲಟ್ಟಣಿಗೆಯನ್ನೂ ತಂದಿಟ್ಟು, ಕೆಲಸ ಆರಂಭಿಸಬೇಕೆನ್ನುವಷ್ಟರಲ್ಲಿ ವಿಪರೀತ ಆಯಾಸದಿಂದ ಕುಳಿತಲ್ಲಿಯೇ ಮೂರ್ಛೆ ಹೋದಳು. ಎಚ್ಚರವಿಲ್ಲದೆ ಅದೆಷ್ಟು ಹೊತ್ತು ಹಾಗೆ ಮಲಗಿದ್ದಳೋ ತಿಳಿಯದು. ಸ್ವರ್ಣಾಂಬಾಳ್

ಮನೆಗೆ ಹಿಂದಿರುಗಿದಾಗ, ಸೀತೆಯ ಅವಸ್ಥೆ ಕಂಡು ರೇಗಿದಳು. ಅವಳನ್ನು ಹಿಡಿದೆತ್ತಿ ಕುಳ್ಳಿರಿಸಿ, ಕೆನ್ನೆಗಳಲ್ಲಿ ಫಳಾರನೆ ಎರಡೇಟು ಕೊಟ್ಟಳು. ಸೀತೆ ಇನ್ನೂ ಮೂರ್ಛಾವಸ್ಥೆಯಲ್ಲಿಯೇ ಇದ್ದಳು. ಏಟುಗಳ ಸುರಿಮಳೆ ತಾಳ ಲಾರದೆ ಕಣ್ಣುಬಿಟ್ಟಳು. ಆ ಸಮಯ ಆ ಹುಡುಗಿಯ ಪರಿತಾಪದ ಸ್ಥಿತಿ ಯನ್ನು ಕಂಡವರು ಕಣ್ಣೀರಿಡದೆ ಇರಲಾರರು. ಆದರೆ ಆರಾಕ್ಷಸಿ ಸ್ವರ್ಣಾಂಬಾಳ್ ಮನಸ್ಸು ಮಾತ್ರ ಕಬ್ಬಿಣಕ್ಕಿಂತಲೂ ಕಠಿಣವಾಗಿತ್ತು.

ಸ್ವರ್ಣಾಂಬಾಳ್ ಸೀತೆಯ ಮೇಲೆ ರೇಗುತ್ತ "ಲೇ, ಅನಿಷ್ಟಪಿಂಡವೇ! ನಡುಮಧ್ಯಾಹ್ನ ನಿದ್ರೆಬೇರೆ ಕೇಡೇನೇ ನಿನಗೆ? ಇನ್ನು ಈ ಮನೆಬಿಟ್ಟು ತೊಲಗು........" ಎಂದಂದು ಅವಳನ್ನು ಕಾಲಿಂದ ಒದ್ದೇಬಿಟ್ಟಳು. ಸೀತೆ ಆಗ ಎದ್ದು ನಿಲ್ಲಲೂ ಸಹ ಅಶಕ್ತಳಾಗಿದ್ದಳು. ತಾನು ಆಗ ಏನು ಮಾಡುತ್ತಿರುವನೆಂಬ ಪರಿಜ್ಞಾನವೇ ಇಲ್ಲ ಅವಳಿಗೆ. ಆದುದರಿಂದ ಮತ್ತೆ ಕೆಳಗೆ ಮಲಗಿದಳು. ಅದು ಸ್ವರ್ಣಾಂಬಾಳಿನ ಸಿಟ್ಟನ್ನು ಮತ್ತಷ್ಟು ಹೆಚ್ಚಿಸಿತು. ಆ ರಾಕ್ಷಸಿ ಆ ಮುಗ್ಧ ಹುಡುಗಿಯನ್ನು ಬಲಾತ್ಕಾರದಿಂದ ಹಿಡಿದೆಬ್ಬಿಸಿ ಎಳೆದು ತಂದು ಮನೆಯಿಂದ ಹೊರದೂಡಿ ಬೀದಿಯ ಬಾಗಿಲ ಅಗಳಿ ಹಾಕಿಕೊಂಡುಬಿಟ್ಟಳು. ಆಗ ನಡುಮಧ್ಯಾಹ್ನ ಒಂದು ಘಂಟೆಯ ಸಮಯ. ಬೇಸಿಗೆಯ ಕಾಲವಾದುದರಿಂದ ರಸ್ತೆಯಲ್ಲಿ ಜನರ ಸುಳಿವೇ ಇರಲಿಲ್ಲ. ಆ ದುರ್ಭಾಗ್ಯ ಹುಡುಗಿ ಬಹಳ ಹೊತ್ತು ಬೀದಿಯ ಬಾಗಿಲ ಹೊಸಲಿನಲ್ಲೇ ಎಚ್ಚರವಿಲ್ಲದೆ ಬಿದ್ದಿದ್ದಳು.

ಸ್ಮರಣೆ ಬಂದಕೂಡಲೇ ಸೀತೆ ಏಳಲಾರದೆ ಎದ್ದುನಿಂತು ಬಾಗಿಲನ್ನು ತಟ್ಟಿ ತನಗೆ ಆಶ್ರಯ ಕೊಡಬೇಕೆಂದು ಸ್ವರ್ಣಾಂಬಾಳನ್ನು ಬಹಳವಾಗಿ ಅಂಗಲಾಚಿ ಬೇಡಿದಳು. ಆದರೆ ಬಾಗಿಲು ತೆರೆಯಲ್ಪಡಲಿಲ್ಲ. ಕೊನೆಗೆ ಸೀತೆಗೆ ಹೊಸದೊಂದು ಯೋಚನೆ ಹೊಳೆಯಿತು. ಆ ಕೂಡಲೇ ಆ ಊರಲ್ಲಿ ತನಗೆ ಪ್ರೀತ್ಯಾದರ ತೋರಿಸುವ ಒಂದೇ ಒಂದು ವ್ಯಕ್ತಿಯಾದ ಸಾವಿತ್ರಮ್ಮನ ಮನೆಗೆ ಮೆಲ್ಲಗೆ ನಡೆದಳು. ಅವಳ ಕಾಲುಗಳು ನಡೆಯಲಾರದೆ 'ಥರಥರ'ನೆ ನಡುಗುತ್ತಿದ್ದುವು. ತಲೆತಿರುಗುತ್ತಿತ್ತು. ಎಲ್ಲವನ್ನೂ ಸೈರಿಸಿಕೊಂಡು ಮೆಲ್ಲನೆ ನಡೆದಳು. "ಇನ್ನು ಈ ರಾಕ್ಷಸಿಯ ಜೊತೆಯಲ್ಲಿ ಬಾಳುವುದ ಕ್ಕಿಂತ, ಬಾವಿಯಲ್ಲಿ ಬಿದ್ದು ಪ್ರಾಣಬಿಡಬಹುದು. ಸಾವಿತ್ರಮ್ಮನವರನ್ನು

ಕಂಡು ಗುಡಿಯಾತ್ತಂಗೆ ರೈಲು ಹತ್ತಿಸಬೇಕೆಂದು ಅಂಗಲಾಚಿ ಬೇಡೋಣ" ಎಂದು ಆಲೋಚಿಸುತ್ತ ಸಾವಿತ್ರಮ್ಮನವರ ಮನೆಯನ್ನು ತಲುಪಿದಳು ಸೀತಾಲಕ್ಷ್ಮಿ.

ಸಾವಿತ್ರಮ್ಮನೂ, ಅವಳ ಸೊಸೆ ಕಾಮಾಕ್ಷಿಯೂ ತಮಾಷೆಯಾಗಿ ಮಾತನಾಡುತ್ತ ಕೋಡಬಳೆ ಮಾಡುತ್ತಿದ್ದರು. ಸೀತೆ ಮನೆಯೊಳಗೆ ಹೋಗಲು ಸಂಕೋಚಪಡುತ್ತ ಬೀದಿಯ ಬಾಗಿಲಲ್ಲೇ ನಿಂತಿದ್ದಳು. ಅವಳನ್ನು ಕಂಡ ಪುಟ್ಟಗೋಪು, "ಅಮ್ಮಾ, ಸೀತಾಮಾಮಿ ಬಂದಿದ್ದಾರೆ" ಎಂದು ಕಿರುಚುತ್ತ ಒಳಗೆ ಓಡಿದನು. ಒಳಗೆ ಬಂದರೆ ಅವನಿಂದ ಸುಮ್ಮನಿರಲು ಸಾಧ್ಯವೇ? ತಟ್ಟೆಯಲ್ಲಿ ಕೈಹಾಕಿ ನಾಲ್ಕು ಕೋಡಬಳೆಗಳನ್ನು ಕಸಿದು ಕೊಂಡು ಓಡಿದನು. ಸಾವಿತ್ರಮ್ಮ "ಲೋ, ಥಾಂಡಿಗ, ಹೀಗೆ ಸುಮ್ಮನೆ ತಿಂದರೆ ಮೈಗಾಗುವುದೇ? ನಿಲ್ಲು, ನಿಲ್ಲು ನಾಳೆ ಬೆಳಿಗ್ಗೆ ಒಂದು ಲೋಟ ಹರಳೆಣ್ಣೆ ಕುಡಿಸುತ್ತೇನೆ. ಸೀತಾ ಬಂದಳಂತೆ! ಈ ಹೊತ್ತಿನಲ್ಲಿ ಅವಳೆಲ್ಲಿ ಬರುತ್ತಾಳೆ? ಕೋಡಬಳೆ ದೋಚಲು ಒಳ್ಳೆಯ ಉಪಾಯ ಹುಡುಕಿದ ಕಣೆ, ನಿನ್ನ ಮಗ!" ಎಂದು ಸೊಸೆಗೆ ಅಂದಳು.

ಬೀದಿಯ ಬಾಗಿಲಿಗೆ ಮುಖಮಾಡಿ ಕುಳಿತಿದ್ದ ಕಾಮಾಕ್ಷಿ "ಹೌದು ಅತ್ತೆ, ಗೋಪು ಹೇಳಿದ್ದು ನಿಜ. ಅಗೋ ನಿಂತಿದ್ದಾಳೆ ಸೀತಾ; ಸ್ವರ್ಣಾಂಬಾಳ ಮಾಮಿ ಬೈದು ಓಡಿಸಿ ಬಿಟ್ಟರೋ ಏನೋ ಪಾಪ. ಒಳಗೆ ಬರಲು ಸಂಕೋಚ ಪಡುತ್ತಾಳೆ, ಪಾಪ" ಎಂದಂದು, ಹಿಟ್ಟಿನ ಕೈಯ ಸಹಿತವೇ ಎದ್ದು ಹೋದಳು.

ಸೊಸೆಯ ಮಾತು ಕೇಳಿ, ಸಾವಿತ್ರಮ್ಮ, "ಆ ಪಾಪಿಷ್ಟಿ ಈ ಹುಡುಗಿಯನ್ನು ಬಹಳ ಕಾಡುತ್ತಾಳೆ. ಕೈಹಿಡಿದ ಗಂಡನೇ ಕೈಬಿಟ್ಟ ನೆಂದರೆ ಆ ಹುಡುಗಿಯ ಗತಿಯೇನು ಪಾಪ! ಒಳಗೆ ಕರೆದುಕೊಂಡುಬಾರೇ ಕಾಮಾಕ್ಷಿ ಆರುತಿಂಗಳ ಗರ್ಭಿಣಿ. ಈ ಉರಿಬಿಸಿಲಲ್ಲಿ ನಮ್ಮ ಮನೆಯ ಬಾಗಿಲಿಗೆ ಬರಬೇಕೆಂದರೆ? ಏನೋ ವಿಷಯವಿರಬೇಕು. ಇದರ ಮೊದಲು ಒಂದು ದಿನವಾದರೂ ಸೀತಾ ಒಂಟಿಯಾಗಿ ಬೀದಿಯಲ್ಲಿ ಬಂದವಳಲ್ಲ!" ಎಂದು ಅನ್ನುತ್ತಿರುವಾಗಲೇ ಕಾಮಾಕ್ಷಿ ಸೀತೆಯನ್ನು ಒಳಗೆ ಕರೆತಂದು ಕುಳ್ಳಿರಿಸಿದಳು. ಅವಳ ಕರುಣಾಜನಕವಾದ ಸ್ಥಿತಿಯನ್ನು ಕಂಡು ಅತ್ತೆ

ಸೊಸೆಯರಿಬ್ಬರೂ ಮಿಡುಕಿದರು.

"ಬಾ, ತಾಯಿ. ಏಕಿಷ್ಟು ಸುಸ್ತಾಗಿರುವಿ? ಮೈಯಲ್ಲಿ ಪ್ರಾಣವೇ ಇಲ್ಲವಲ್ಲಾ? ಕೆನ್ನೆಗಳು ಏಕಿಷ್ಟು ಕೆಂಪಗೆ ಬಾತುಕೊಂಡಿವೆ? ಕಾಮಾಕ್ಷಿ ಒಂದು ಲೋಟ ಮಜ್ಜಿಗೆಯಾದರೂ ತಂದುಕೊಡು. ಸೀತಾ ತೆಗೆದುಕೋ, ನಾಲ್ಕು ಕೋಡಬಳೆ ತಿನ್ನು ತಾಯಿ" ಎಂದು ಒಂದು ತಟ್ಟೆಯ ತುಂಬ ಕೋಡಬಳೆಗಳನ್ನು ಸೀತೆಯ ಮುಂದಿಟ್ಟಳು. ಕಾಮಾಕ್ಷಿ ಬೆಳ್ಳಿಯ ಬಟ್ಟಲ ತುಂಬ ಮಜ್ಜಿಗೆ ತಂದು ಸೀತೆಯ ಕೈಗೆ ಕೊಟ್ಟಳು. ಮಜ್ಜಿಗೆಯನ್ನು ಕುಡಿದು ಬಟ್ಟಲನ್ನು ಕೆಳಗಿಟ್ಟು ಸೀತೆ, "ಮಾಮೀ, ನನಗ್ಯಾಕೋ ಬಹಳ ಆಯಾಸವಾಗಿದೆ. ಹೀಗೆ ಕೊಂಚ ಮಲಗಿಕೊಳ್ಳಲೇ?" ಎಂದು ಕೆಳಗೆ ಮಲಗಿದಳು. ಸಾವಿತ್ರಮ್ಮ "ಕಾಮಾಕ್ಷಿ ಚಾಪೆ ತಂದು ಹಾಸಮ್ಮಾ" ಎಂದು ಸಂತೈಸಿದಳು.

"ಬೇಡ, ಮಾಮಿ ಬೇಡ. ಈ ಊರಲ್ಲಿ ನೀವೊಬ್ಬರೇ ನನ್ನ ಮೇಲೆ ಪ್ರೀತಿ ತೋರುವವರು. ನೀವು ಪರಾಶಕ್ತಿಯ ಅವತಾರ. ಅದೇ, ನನ್ನರಿವಿಲ್ಲದೆಯೇ ನನ್ನ ಕಾಲುಗಳು ನಿಮ್ಮ ಹತ್ತಿರ ಕರೆತಂದಿವೆ" ಎಂದಂದು ಅಷ್ಟರಮೇಲೆ ಮಾತನಾಡಲಾರದೆ ಸೀತಾಲಕ್ಷ್ಮಿ ಕಣ್ಣೀರಿಟ್ಟಳು.

"ಹಾಗಲ್ಲ ಸೀತಾಲಕ್ಷ್ಮಿ. ನಾನೊಬ್ಬಳು ಮಾತ್ರವಲ್ಲ. ಈ ಊರಿಗೆ ಊರೇ ನಿನ್ನನ್ನು ಒಳ್ಳೆಯ ಹುಡುಗಿಯೆಂದು ಕೊಂಡಾಡುತ್ತಿದೆ. ನಿನ್ನ ದಡ್ಡ ಗಂಡನಿಗೇ ನಿನ್ನೊಡನೆ ಸಂಸಾರ ನಡೆಸಲು ತಿಳಿಯದೇ ಹೋಯಿತು. ಆ ಪಾಪಿಷ್ಟಿ ಸ್ವರ್ಣಾಂಬಾಳ್ ನಿನಗೆ ಚಿತ್ರಹಿಂಸೆ ಕೊಡುತ್ತಿದ್ದಾಳೆ. ಈ ಉರಿಬಿಸಿಲಲ್ಲಿ ಯಾಕೆ ಬಂದೆ? ಮೈ ಚನ್ನಾಗಿಲ್ಲವೇನು?" ಎಂದು ನಿಧಾನ ವಾಗಿ ವಿಚಾರಿಸಿದಳು. ಸೀತಾಲಕ್ಷ್ಮಿ ಕಣ್ಣೀರಿಡುತ್ತ ವಿಷಯವೆಲ್ಲವನ್ನೂ ವಿವರವಾಗಿ ಹೇಳಿದಳು. ಕಾಮಾಕ್ಷಿಯನ್ನೂ ಸಾವಿತ್ರಮ್ಮ ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳಿಗಿಂತ ಹೆಚ್ಚು ವಾತ್ಸಲ್ಯದಿಂದ ನೋಡಿಕೊಳ್ಳುವುದನ್ನು ಸೀತಾಲಕ್ಷ್ಮಿ ಪದೇ ಪದೇ ನೋಡಿ ಆಶ್ಚರ್ಯಪಟ್ಟಿರುವಳು. ಸಾವಿತ್ರಮ್ಮ ಸಾಕ್ಷಾತ್ ಸಾವಿತ್ರೀ ಅವತಾರವೇಯೆಂದು ಅವಳು ಭಾವಿಸಿದ್ದಳು. ತನಗೆ ಇಂತಹ ಅತ್ತೆಮ್ಮ ದೊರಕಿರಬಾರದೇ ಎಂದಂದುಕೊಂಡು ತನ್ನ ವಿಧಿಯನ್ನು ಹಿಂದೆ ಬೈದುಕೊಂಡಿದ್ದಳು.

ಸೀತಾಲಕ್ಷ್ಮಿಯ ಪರಿತಾಪಕರವಾದ ಸ್ಥಿತಿಯನ್ನು ಕಂಡು ಅತ್ತೆ ಸೊಸೆಯರಿಬ್ಬರೂ ಬಹಳವಾಗಿ ವ್ಯಸನಪಟ್ಟರು.

ಸಾವಿತ್ರಮ್ಮ, "ಪುನಃ ಆ ರಾಕ್ಷಸಿಯ ಮನೆಯಲ್ಲಿ ಕಾಲಿಡಬೇಡ. ಸುಮ್ಮನೆ ಗುಡಿಯಾತ್ತಂಗೆ ಹಿಂದಿರುಗು. ನಿನ್ನ ಗಂಡ ಬಂದರೆ ಅವನಿಗೆ ನೀನಿರುವ ಸ್ಥಳವನ್ನು ತಿಳಿಸುತ್ತೇವೆ. ಮಾವಾಗೆ ಹೇಳಿ ನಿನ್ನ ಜೊತೆಗೆ ವಾಲಾಜಾಪೇಟೆಯವರೆಗೆ ಬಂದು ಅಲ್ಲಿಂದ ಒಳ್ಳೆಯ ಜೊತೆ ಸೇರಿಸಿ ನಿನ್ನ ತೌರೂರಿಗೆ ಕಳುಹಿಸಲು ಹೇಳುತ್ತೇನೆ. ನಮ್ಮ ಮನೆಯಲ್ಲಿ ಎರಡು ದಿನ ಇದ್ದು, ನೀನು ಊರಿಗೆ ಹೋದರೆ ನಮಗೂ ಸಂತೋಷ" ಎಂದಳು.

ಸೀತೆ ಕುಗ್ಗಿದ ಸ್ವರದಲ್ಲಿ, "ಬೇಡ ಮಾವಿ. ನಿಮಗೆಲ್ಲ ಈಗಾಗಲೇ ಬಹಳ ತೊಂದರೆ ಕೊಟ್ಟಿದ್ದೇನೆ. ನಾಳೆ ಬೆಳಿಗ್ಗೆ, ದಯವಿಟ್ಟು ನನ್ನನ್ನು ರೈಲು ಹತ್ತಿಸಿಬಿಡಿ. ಬಹಳ ಉಪಕಾರವಾಗುವುದು. ರೈಲು ಚಾರ್ಜಿಗೆ ನನ್ನ ಕೈಯಲ್ಲಿ ಒಂದು ಬಿಡಿ ಕಾಸು ಸಹ ಇಲ್ಲ. ಕೊಳ್ಳಿ, ಈ ಉಂಗುರವನ್ನಿಟ್ಟುಕೊಂಡು ನನಗೆ ಇಪ್ಪತ್ತೈದು ರೂಪಾಯಿಗಳು ಕೊಟ್ಟರೆ ತುಂಬ ಉಪಕಾರವಾಗುವುದು" ಎಂದು ತನ್ನ ಬೆರಳಲ್ಲಿದ್ದ ಉಂಗುರವನ್ನೂ ಕಳಚಿ ಸಾವಿತ್ರಮ್ಮನ ಕಡೆಗೆ ನೀಡಿದಳು.

ಸಾವಿತ್ರಮ್ಮ ಕಣ್ಣೊರಸಿಕೊಂಡು ಬಹಳ ದುಃಖದಿಂದ "ಬೇಡವಮ್ಮಾ ಮಗೂ, ನಿನ್ನ ರೈಲು ಚಾರ್ಜಿಗೆ ಕೊಡಲು ನನ್ನಿಂದ ಆಗದೇ? ಸೌಖ್ಯವಾಗಿ ಊರನ್ನು ತಲುಪಿ, ಮಗನನ್ನು ಹಡೆದು ಬೇಗ ಗಂಡನನ್ನು ಸೇರಿ ಸುಖವಾಗಿರು ತಾಯಿ. ಇದೇ ನನ್ನ ಆಶೀರ್ವಾದ. ಮಾವಾ ಒಳಗೆ ಮಲಗಿದ್ದಾರೆ. ಹೋಗಿ ನಿನ್ನ ಸಂಗತಿಯನ್ನು ಹೇಳಿಬರಲೇ? ನೀನು ಸ್ವಲ್ಪ ಮಲಗಿಕೋ" ಎಂದು ಆದರದ ನುಡಿ ನುಡಿದು, ಎದ್ದು ತನ್ನ ಪತಿ ಮಲಗಿರುವ ಕೊಠಡಿಗೆ ಹೋದಳು. ಕೋಡಬಳೆಗಳನ್ನು ಕರಿಯುತ್ತ ಕಾಮಾಕ್ಷಿಯು ತನ್ನ ಪ್ರಿಯ ಗೆಳತಿಯ ದುರ್ದೆಶೆಯನ್ನು ನೆನೆದು ಮರುಗುತ್ತಿದ್ದಳು. ಸೀತಾಲಕ್ಷ್ಮಿ ಬಹಳ ಬಳಲಿದ್ದಳು. ಮಲಗಿದ್ದೆಡೆಯಲ್ಲೇ ಚೆನ್ನಾಗಿ ನಿದ್ದೆಹೋದಳು.

ರಾಣಿಪೇಟೆಯಿಂದ ಗುಡಿಯಾತ್ತಂಗೆ ಹೋಗಲು ಆ ಊರಲ್ಲಿ ರೈಲು ಹತ್ತಿ ವಾಲಾಜಾರೋಡ್ ಜಂಕ್ಷನಿನಲ್ಲಿ ರೈಲು ಬದಲಾಯಿಸಬೇಕು. ಆದುದರಿಂದ ಮರುದಿನ ಬೆಳಿಗ್ಗಿನ ಗಾಡಿಯಲ್ಲಿ ಸಾವಿತ್ರಮ್ಮನ ಯಜಮಾನ

ರಾದ ಮಧುಸೂದನರಾಯರು ಸೀತಾಲಕ್ಷ್ಮಿಯನ್ನು ಕರೆದುಕೊಂಡು ವಾಲಾಜಾ ಪೇಟೆಯವರೆಗೆ ಹೋಗಿ ಅವಳನ್ನು ಮದರಾಸ್ ರೈಲಲ್ಲಿ ಹತ್ತಿಸಿ ಬರಲು ಹೊರಟರು. ಸಾವಿತ್ರಮ್ಮ ಸೀತಾಲಕ್ಷ್ಮಿಯನ್ನು ತನ್ನ ಸ್ವಂತ ಸೊಸೆಯೆಂದೇ ಭಾವಿಸಿದ್ದಳು. ಮುಂಜಾನೆಯೇ ಎದ್ದು ಸೀತೆಗೆ ಕಾಫೀ, ಉಪ್ಪಿಟ್ಟು ಮಾಡಿಕೊಟ್ಟಳು. ಗರ್ಭಿಣಿಗೆ ತಲೆಬಾಚಿ ಜಡೆ ಹೆಣೆದು ಹಣೆಗೆ ಕುಂಕುಮವಿಟ್ಟು ರವಿಕೇಖಣದ ಸಹಿತ ತಾಂಬೂಲ ಕೊಟ್ಟಳು.

ಸೀತಾಲಕ್ಷ್ಮಿಯು ಸಹ ಮರ್ಯಾದೆಯಾಗಿ ಸಾವಿತ್ರಮ್ಮನಿಗೂ, ಮಧುಸೂದನರಾಯರಿಗೂ, ಮಣಿದು ಎದ್ದು, ತನ್ನ ಧನ್ಯವಾದಗಳನ್ನು ವಿನಯವಾಗಿ ವ್ಯಕ್ತಪಡಿಸಿದಳು. “ ಮಾವಿ, ನೀವೂ, ಮಾವಾ, ನನಗೆ ಮಾಡಿರುವ ಈ ಮಹದುಪಕಾರಗಳನ್ನು ನಾನು ಎಂದೆಂದಿಗೂ ಮರೆಯಲಾರೆ. ನಾನೊಬ್ಬ ನಿರ್ಭಾಗ್ಯಳು. ನಿಮಗೆ ಪ್ರತಿಮಾಡಲು ನನಗೆ ಶಕ್ತಿ ಇಲ್ಲ. ನಾನು ಬರಲೇ? ಕಾಮೂ, ನಾನು ಬರುತ್ತೇನಮ್ಮ. ನನ್ನ ಸ್ವಂತ ಅಕ್ಕನಂತೆ ನನ್ನ ಮೇಲೆ ಮಮತೆ ತೋರಿದೆ. ನಿಮ್ಮನ್ನೆಲ್ಲ ಬಿಟ್ಟಗಲ ಬೇಕೆಂದರೆ ಬಹಳ ದುಃಖವಾಗುತ್ತದೆ. ಸ್ವರ್ಣತ್ತೆಯನ್ನು ಕಂಡರೆ ನನ್ನ ನಮಸ್ಕಾರ ತಿಳಿಸಮ್ಮ. ಗೋಪು, ನನ್ನ ಕಂದಾ, ನಾನು ಬರಲೇ? ನನ್ನ ಚಿನ್ನಾ ” ಎಂದು ಅವನನ್ನು ಅಪ್ಪಿಕೊಂಡು ಮುದ್ದಿಟ್ಟಳು. ಮಧುಸೂದನರಾಯರು ರೈಲಿಗೆ ಹೊತ್ತಾಯಿತೆಂದು ಅವಸರಮಾಡಲು ಬೀದಿಯ ಬಾಗಿಲಲ್ಲಿ ತಯಾರಾಗಿ ನಿಂತಿದ್ದ ಗಾಡಿಯಲ್ಲಿ ಸೀತಾಲಕ್ಷ್ಮಿ ಹತ್ತಿ ಕುಳಿತಳು. ಎಲ್ಲರ ಕಣ್ಣುಗಳಲ್ಲೂ ಕಣ್ಣೀರು ತುಂಬಿಬಂತು.

“ ಆ ಪಾಪಿಷ್ಟಿ ಇವಳನ್ನು ಇಷ್ಟೊಂದು ಗೋಳಹುಯ್ದುಕೊಂಡರೂ ಸ್ವರ್ಣತ್ತೆಯನ್ನು ಕಂಡರೆ ನನ್ನ ನಮಸ್ಕಾರ ತಿಳಿಸಮ್ಮ ” ಎಂದಂಥ ಸೀತಾಲಕ್ಷ್ಮಿ ನಿರ್ಮಲ ಮನಸ್ಸನ್ನು ನೆನೆ ನೆನೆದು ಅತ್ತೆ ಸೊಸೆಯರಿಬ್ಬರೂ ಆ ದಿನವೆಲ್ಲ ಅವಳನ್ನು ಹೊಗಳುತ್ತಲೂ, ಅವಳ ಕಷ್ಟಗಳಿಗಾಗಿ ಪಶ್ಚಾತ್ತಾಪಪಡುತ್ತಲೂ ಸಂಭಾಷಿಸುತ್ತಿದ್ದರು.

೩

ವಾಲಾಜಾವಿನಲ್ಲಿ ಮಧುಸೂದನರಾಯರು ಸೀತಾಲಕ್ಷ್ಮಿಯನ್ನು ಮದರಾಸಿನ ಟ್ರೈನಿನಲ್ಲಿ ಹೆಂಗಸರ ಡಬ್ಬಿಯಲ್ಲಿ ಹತ್ತಿಸಿ, ಅವಳ ಕೈಯ

ಲ್ಲೆರಡು ಪೋಸ್ಟ್ ಕವರುಗಳನ್ನೂ ಕೊಟ್ಟು, "ಹೋಗಿ ಬಾಮ್ಮಾ ಸೀತಾ· ಊರನ್ನು ತಲುಪಿದೊಡನೆಯೇ ನಿಮ್ಮ ಅಜ್ಜನವರ ಕ್ಷೇಮ ಸಮಾಚಾರ ಮತ್ತು ಆರೋಗ್ಯವನ್ನು ಕುರಿತೂ ಕಾಗದ ಬರಿ. ಜೋಕೆ" ಎಂದು ಹೇಳಿದರು. ಸೀತಾಲಕ್ಷ್ಮಿಯು ಸಹ ತಲೆಯನ್ನು ತಗ್ಗಿಸಿಕೊಂಡು ಮೆಲುದನಿಯಲ್ಲಿ ಅವರಿಗೆ ಸೂಕ್ತ ಉತ್ತರವನ್ನಿತ್ತಳು. ರೈಲುಗಾಡಿಯೂ ಸಹ ಆರ್ಭಟಿಸುತ್ತ ಹೊರಟಿತು.

ಕೊಂಚ ಹೊತ್ತಿನವರೆಗೆ ದಿಗ್ಭ್ರಮೆ ಹೊಂದಿದವಳಾಗಿ ಲೋಕವನ್ನೇ ಮರೆತು ಕುಳಿತಿದ್ದ ಸೀತೆ, ಗಾಡಿಯಲ್ಲಿ ಮತ್ತಾರಿರುವರೆಂದು ನೋಟವನ್ನು ಹೊರಳಿಸಿದಳು. ಎರಡೂವರೆ ವರ್ಷದ ಹೆಣ್ಣುಮಗುವೊಂದು "ಮಾಮೀ, ಮಾಮೀ" ಎಂದನ್ನುತ್ತ ಅವಳ ಸೆರಗನ್ನು ಹಿಡಿದು ಎಳೆಯಿತು. ಅವರ ತಾಯಿ, "ಈ ಕತ್ತೆಗೆ ಕೊಂಚವಾದರೂ ಹೊಸ ಮನುಷ್ಯರೆಂಬ ನಾಚಿಕೆಯೇ ಇಲ್ಲ." ಎಂದೆಂದು ಮಗುವನ್ನು ತನ್ನಕಡೆಗೆ ಸೆಳೆದುಕೊಂಡಳು. ಮಗು ಕಿಟ್ಟನೆ ಕಿರಿಚಿಕೊಂಡಿತು. ಆ ಮಗುವಿನ ತಾಯಿಯ ಛಾಯೆಯನ್ನು ಹೋಲಿಸುವ ಮತ್ತೊಬ್ಬ ವಯೋಧಿಕ ಹೆಂಗುಸು ಅವಳ ಪಕ್ಕದಲ್ಲಿ ಕುಳಿತಿದ್ದಳು. ಆಕೆ ಆ ಹುಡುಗಿಯ ತಾಯಿ ಎಂಬುದನ್ನು ಕಂಡ ಮಾತ್ರದಲ್ಲಿ ಅರಿಯಬಹುದು. ಆಕೆ ಮಗಳನ್ನು ಕುರಿತು "ಮಗುವನ್ನು ಬಿಡೇ, ಯಾಕೆ ಸುಮ್ಮನೆ ಎಳೆದು ಅಳಿಸುತ್ತೀ" ಎಂದು ಸಿಟ್ಟುಮಾಡಿಕೊಂಡಳು. ಅಷ್ಟರೊಳಗಾಗಿ ಸೀತಾಲಕ್ಷ್ಮಿ "ಬಾ, ನನ್ನ ಮುದ್ದುಗಿಣಿ" ಎಂದು ಮಗುವನ್ನು ಎತ್ತಿ ಮಡಿಲಲ್ಲಿ ಇಟ್ಟುಕೊಂಡು, ಮುದ್ದಿಟ್ಟಳು. ಆ ಡಬ್ಬಿಯಲ್ಲಿ ಸೀತಾಲಕ್ಷ್ಮಿ, ಆ ಹುಡುಗಿ, ಅವಳ ತಾಯಿ, ಆ ಪುಟ್ಟ ಹುಡುಗ ಇವರನ್ನು ಬಿಟ್ಟರೆ ಮತ್ತೆ ಯಾರೂ ಇರಲಿಲ್ಲ. ಆ ಮಗುವೂ ಸೀತೆಯೂ ತುಂಬ ಸ್ನೇಹಿತರಾಗಿಬಿಟ್ಟರು. ಮಗುವಿನ ಸಂಗಡ ಆಟವಾಡುವುದರಲ್ಲಿ ಸೀತಾಲಕ್ಷ್ಮಿಗೆ ಹೊತ್ತು ಹೋದದ್ದೇ ತಿಳಿಯಲಿಲ್ಲ. ಕೊಂಚ ಹೊತ್ತು ತನ್ನ ಕಷ್ಟಗಳನ್ನೆಲ್ಲ ಮರೆತಿದ್ದಳು. ಸೀತಾಲಕ್ಷ್ಮಿಗೂ ಆ ಇಬ್ಬರು ಹೆಂಗಸರಿಗೂ ನಡುವೆ ಮಾತುಕತೆ ನಡೆಯಿತು. ಆ ಹುಡುಗಿ, ಸೀತಾಲಕ್ಷ್ಮಿಗಿಂತ ಎರಡು ಮೂರು ವರ್ಷಗಳು ಹಿರಿಯವಳಾಗಿರಬಹುದು. ಅವಳೂ ಏಳು ತಿಂಗಳ ಗರ್ಭಿಣಿ; ಎರಡನೆಯ ಬಸಿರು.

ತಾಯಿ ತಂದೆಯರಿಬ್ಬರೂ ಹುಡುಗಿಯ ಗಂಡನ ಮನೆಗೆ ಹೋಗಿ ಅವಳನ್ನು ಬಾಣಂತನಕ್ಕಾಗಿ ತಮ್ಮ ಊರಾದ ಚಿತ್ತೂರಿಗೆ ಕರೆದುಕೊಂಡು ಬರುತ್ತಿದ್ದರು. ಆ ಹುಡುಗಿಯ ತಂದೆ, ಗಂಡಸರ ಡಬ್ಬಿಯಲ್ಲಿ ಕುಳಿತಿದ್ದರು. ಪ್ರತಿಯೊಂದು ಸ್ಟೇಷನಿನಲ್ಲೂ ಅವರು ಇಳಿದು ಬಂದು "ಏನುಬೇಕು ಲಲಿತಾ? ಕಾಫೀ ಕೊಂಡು ತರಲೇ? ಪಾಪಚ್ಚಿ ವಿಮಲೆಗೆ ಏನುಬೇಕು? ರೆಸ್ಟೋರೇಂಟ್ ಡಬ್ಬಿಯಲ್ಲಿ ಬಿಸಿಬಿಸಿ ತಿನಿಸು ಮಾಡಿದ್ದಾರೆ ಆದೂನೂ ಕೊಂಚ ಮೈಸೂರುಪಾಕೂ ಕೊಂಡು ತರಲೇ?" ಎಂದೆಲ್ಲ ಮಗಳನ್ನೂ, ಮೊಮ್ಮಗಳನ್ನೂ ವಿಚಾರಿಸಿಕೊಂಡು ಹೋಗುತ್ತಿದ್ದರು. ಒಂದಿಲ್ಲೊಂದು ತಿಂಡೀರ್ಥಗಳನ್ನು ಕೊಂಡು ತಂದು ಕೊಟ್ಟು ಮೊಮ್ಮಗಳನ್ನು ಮುದ್ದಾಡಿ ಬಿಟ್ಟು ಹೋಗುತ್ತಿದ್ದರು.

ಈ ಅಚ್ಚುಕಟ್ಟಾದ ಸಂಸಾರದಲ್ಲಿ ಉಕ್ಕಿ ಸುರಿಯುವ ಪ್ರೇಮಾಮೃತವನ್ನು ಕಂಡು ಸೀತೆ ಆಶ್ಚರ್ಯಪಟ್ಟಳು. ತಬ್ಬಲಿ ಹುಡುಗಿ ಸೀತಾಲಕ್ಷ್ಮಿ ತನ್ನ ಶೈಶವಾವಸ್ಥೆಯಲ್ಲಿಯೇ ತಾಯಿ ತಂದೆಯರನ್ನು ಕಳೆದುಕೊಂಡಿದ್ದಳು. ಆದುದರಿಂದ ಹೆತ್ತವರ ಪ್ರೇಮವಾತ್ಸಲ್ಯದ ಅನುಭವವನ್ನೇ ಕಂಡರಿಯಳು. ತನ್ನ ವಯೋಧಿಕ ತಾತಂದಿರಿಂದ ಸಾಕಲ್ಪಟ್ಟಳು. ತಾತಂದಿರು ಕೆಲಸದಿಂದ ನಿವೃತ್ತರಾದಮೇಲೆ ಐದಾರು ವರ್ಷಗಳಿಂದ ಗುಡಿಯಾತ್ತಂನಲ್ಲಿ ನೆಲೆಸಿದ್ದರು ತಾನು ದಿಕ್ಕಿಲ್ಲದ ಅನಾಥಗಳಾಗಿ ತಾತನ ಮನೆಗೆ ಹಿಂದಿರುಗುತ್ತಿರುವುದನ್ನೂ ಆ ಹುಡುಗಿಯನು ಅವಳನ್ನು ಹೆತ್ತವರು ಸರ್ವೋಪಚಾರಗಳನ್ನು ಮಾಡಿ ಪ್ರೇಮಾಮೃತದಿಂದ ಅವಳನ್ನು ಅಭಿಷೇಕ ಮಾಡಿ ತಮ್ಮ ಮನೆಗೆ ಆದರದಿಂದ ಕರೆದುಕೊಂಡು ಹೋಗುವುದನ್ನೂ ಸರಿದೂಗಿ ನೋಡಿ, ಭಗವಂತನು ಅವರವರ ಪೂರ್ವಜನ್ಮ ಪುಣ್ಯಕ್ಕೆ ತಕ್ಕ ಫಲವನ್ನು ನೀಡುತ್ತಾನೆಂದು ಸಮಾಧಾನ ತಂದುಕೊಂಡಳು. ಆ ಸತ್ಕುಟುಂಬದವರೂ ಕಾಟ್ಪಾಡಿ ಜಂಕ್ಷನಲ್ಲಿ ಇಳಿಯಲಾಗಿ, ಏಕಾಂತ ತಾಳಲಾರದೆ ಅವಳಿಗೆ ದುಃಖ ಉಕ್ಕಿಬಂತು. ವೇದನೆಯಿಂದ ಬಹಳ ಹೊತ್ತು ಬಿಕ್ಕಿ ಬಿಕ್ಕಿ ಅತ್ತಳು.

ಗುಡಿಯಾತ್ತಂ ಸ್ಟೇಷನ್ ಸಮೀಪಿಸಲು ಬಹಳ ಸಮಯ ಇರುವಾಗಲೇ, ಗುಡಿಯಾತ್ತಂ ವ್ಯವಸಾಯ ಫಾರಂನ (Agricultural farm)

ಮತ್ತು ಆ ಊರಿನ ಜಮೀನ್ದಾರರುಗಳ ಸೊಂಪಾದ ತೋಟಗಳು ಕಾಣಿಸಿ ಕೊಂಡವು. ತೆಂಗು, ಮಾವು, ಕಸೀಮಾವು, ಬಾಳೆ, ಸೀಬೆ, ಹಲಸು, ದಾಳಿಂಬೆ, ನಿಂಬೆ, ಹೇರಿಳೆ ಮೊದಲಾದ ಹಣ್ಣು ಹಂಪಲಗಳ ಗಿಡ ಮರಗಳಲ್ಲಿ ಗೊಂಚಲು ಗೊಂಚಲಾಗಿ ಹಣ್ಣುಗಳು ತೂಗಾಡುತ್ತಿದ್ದುವು. ಅತಿ ರಮಣೀಯವಾದ ತೋಟಗಳು ಇಕ್ಕಡೆಗಳಲ್ಲೂ ತೋರ್ಪಡಲು ಅವುಗಳ ಸುತ್ತಲೂ ಹಚ್ಚನೆಯ ಹುಲ್ಲುಗಾವಲೂ, ಅದರಾಚೆ ಗದ್ದೆಗಳೂ ಕಬ್ಬಿನ ತೋಟಗಳೂ ಕಣ್ಣಿಗೆ ಹಬ್ಬವಾಗಿತ್ತು. ಈ ಮನೋಹರವಾತಾವರಣದಲ್ಲಿ ತೇಲಿಬರುವ ಮಂದಮಾರುತವು ರೈಲುಗಾಡಿಯ ಕಿಟಕಿಯ ಮೂಲಕ ನುಗ್ಗಿ ಬಂದು ಶೋಕದಲ್ಲಿ ಮುಳುಗಿದ್ದ ಸೀತಾಲಕ್ಷ್ಮಿಯನ್ನು ಆಲಂಗಿಸಿ ಅವಳಿಗೆ ಕೊಂಚ ನೆಮ್ಮದಿಯನ್ನುಂಟುಮಾಡಿತು. ಇಷ್ಟರೊಳಗಾಗಿ ಗಾಡಿ ನಿಲ್ದಾಣವನ್ನು ತಲುಪಲಾಗಿ, ಸೀತಾಲಕ್ಷ್ಮಿ ಸಡಗರದಿಂದ ಗಾಡಿಯಿಂದ ಇಳಿಯಲು ಸಿದ್ಧಳಾದಳು. ತನ್ನ ತಾತಂದಿರ ಊರು ಸಮೀಪಿಸಿತೆಂಬ ಕುತೂಹಲದಲ್ಲಿ ತನ್ನ ದುಃಖವನ್ನು ಕೊಂಚ ಮರೆತಳು.

ಗಾಡಿಯಿಂದ ಇಳಿದ ಸೀತಾಲಕ್ಷ್ಮಿ ಯಾರನ್ನೂ ಯಾವುದನ್ನೂ ಕೂಡ ತಲೆಯೆತ್ತಿ ನೋಡದೆ, ತಲೆತಗ್ಗಿಸಿಕೊಂಡು, ಸ್ಟೇಷನಿಗೆ ಸಮೀಪದಲ್ಲೇ ಇರುವ ತನ್ನ ತಾತಂದಿರ ಮನೆಯನ್ನು ಕುರಿತು ನಡೆದಳು. ಸಾವಿತ್ರಮ್ಮ ದಾರಿಗೆಂದು ಕೊಟ್ಟಿದ್ದ ಕೊಂಚ ಹಣ್ಣು ಹಂಪಲು, ಭಕ್ಷ್ಯಗಳು ತುಂಬಿದ ಸಣ್ಣ ಬುಟ್ಟಿಯ ಹೊರತು, ಅವಳ ಹತ್ತಿರ ಮತ್ತಾವ ಸಾಮಾನೂ ಇರಲಿಲ್ಲ.

ಪಾಪ! ಆ ಹುಡುಗಿಗೆ ಇಲ್ಲೂ ದುರದೃಷ್ಟ ಕಾದಿರಬೇಕೆ? ಮುದುಕರು ಶಖತ್ ಖಾಯಿಲೆಯಾಗಿ ಮಲಗಿದ್ದರು. ಸೀತಾಲಕ್ಷ್ಮಿಯ ಅನಿರೀಕ್ಷಿತ ಆಗಮನವನ್ನು ಕಂಡ ಮುದುಕರು "ಅಮ್ಮಾ ಸೀತಾ, ಬಂದೆಯಾ? ತಳಿಯಂದಿರು ಎಲ್ಲಿ?" ಎಂದು ತಡವರಿಸುತ್ತ ಒಂದೆರಡು ಮಾತನ್ನು ಆಡಲು ಯತ್ನಿಸಿದರು. ಜ್ವರ ಬಹಳ ಹೆಚ್ಚಾಗಿತ್ತಲ್ಲದೆ, ಮೊಮ್ಮಗಳ ಅನಿರೀಕ್ಷಿತ ಆಗಮನದಿಂದ ಮುದುಕರು ಆ ಕ್ಷಣ ಮೂರ್ಛೆ ಹೋದರು ಶ್ರೀರಾಮದೇವರಿಗೆ ಎಡೆಬಿಡದೆ ಸೇವೆಸಲ್ಲಿಸುತ್ತಿದ್ದ ಸಾಕ್ಷಾತ್ ಹನುಮಂತ ಸ್ವಾಮಿಯಂತೆ ಮುದುಕರ ಸಮೀಪದಲ್ಲಿ ಸೇವಕ ಲಿಂಗನಿದ್ದ. ಅವನು

ಮುದುಕರ ಅವಸ್ಥೆಯನ್ನು ಕಂಡು, “ಅಮ್ಮಾ, ರಾಯರಿಗೆ ಜ್ಞಾನತಪ್ಪಿದೆ. ಈ ತೈಲವನ್ನು ಅವರ ಕೈಕಾಲುಗಳಿಗೆಲ್ಲ ಕೊಂಚತಿಕ್ಕುತ್ತಿರಿ. ನಾನು ಹೋಗಿ ಡಾಕ್ಟರನ್ನು ಕರೆತರುತ್ತೇನೆ.” ಎಂದೆಂದು ತೈಲದ ಶೀಸೆಯೊಂದನ್ನು ಅವಳ ಕೈಗಿತ್ತು ಡಾಕ್ಟರನ್ನು ಕರೆತರಲು ಓಡಿದನು. ಅಜ್ಜನ ಕಷ್ಟದೆಶೆಯನ್ನು ಕಂಡು ಆವಳಿಗೆ ಅತಿವೇದನೆ ಏರ್ಪಟ್ಟಿತು. ಕಣ್ಣೀರ ಪ್ರವಾಹ ಹರಿಸಿದಳು. ಲಿಂಗ ಹೇಳಿದಂತೆಯೇ ವಯೋಧಿಕರ ಕೈಕಾಲುಗಳಿಗೆ ತೈಲ ತಿಕ್ಕುತ್ತಿದ್ದಳು. ಹದಿನೈದು ನಿಮಿಷಗಳೊಳಗಾಗಿಯೇ ಲಿಂಗ ಡಾಕ್ಟರನ್ನು ಕರೆತಂದು ಬಿಟ್ಟ. ಮನೆಯೊಳಗೆಬಂದ ಡಾಕ್ಟರು, ವಯೋಧಿಕರ ಸಮೀಪದಲ್ಲಿ ತರುಣಿಯೊಬ್ಬಳು ಕುಳಿತು, ಶುಶ್ರೂಷೆಮಾಡುತ್ತಿರುವುದನ್ನು ಕಂಡು ಅರ್ಥವಾಗದೆ ಕಕ್ಕಾಬಿಕ್ಕಿ ನೋಡಿದರು. ಬಳಿಕ ಲಿಂಗನ ಮೂಲಕ ಬಂದಿರುವವರು ಯಾರೆಂದು ಅರಿತು, ಮುದುಕರನ್ನು ಪರಿಶೀಲಿಸಿ ನೋಡಿದರು. ಯಾವುದೋ ಒಂದು ಔಷಧಿಯನ್ನು ಮುದುಕರ ಮೂಗಿನ ಹತ್ತಿರ ತೋರಿಸಿ, ಮತ್ಯಾವುದೋ ಚಿಕಿತ್ಸೆಯನ್ನು ಮಾಡಿದರು. ಆ ಬಳಿಕ, “ಏನೂಭಯವಿಲ್ಲ ತಾಯಿ, ಯೋಚನೆ ಮಾಡಬೇಡಿ. ಹದಿನೈದು ದಿನಗಳಿಂದ ಒಂದೇ ಸಮನಾಗಿ ಜ್ವರ ಹೊಡೆಯುತ್ತಿದೆ. ಈ ಬಲಹೀನ ಸ್ಥಿತಿಯಲ್ಲಿ ನಿಮ್ಮ ಅನಿರೀಕ್ಷಿತ ಬರುವಿಕೆಯನ್ನು ಕಂಡು ಬೆರಗಾಗಿರಬೇಕು. ಇದೂ ಸಹ ಅವರು ತಡೆಯಲಾರದೇ ಹೋದರು. ಇನ್ನೂ ಐದು ನಿಮಿಷಗಳೊಳಗಾಗಿ ಪ್ರಜ್ಞೆ ಬರ ಬಹುದು” ಎಂದೆಂದು, ಕೊಂಚಕಾಲ ಸುಮ್ಮನೆ ನಿಂತರು. ಬಳಿಕ ಸೀತಾಲಕ್ಷ್ಮಿಯನ್ನು ಕುರಿತು, “ಹಿಂದು ಮುಂದು ತಿಳಿಸದೆ ಈ ರೀತಿ ನೀವು ಬರಬೇಕಾದ ಪ್ರಮೇಯ ಒದಗಿತೇನು?” ಎಂದು ಪ್ರಶ್ನಿಸಿದರು.

ಸೀತೆ ಮೆಲುನುಡಿಯಲ್ಲಿ “ಹೌದು, ನಾನು ಬರುವುದು ಅವರಿಗೆ ಗೊತ್ತಿಲ್ಲ” ಎಂದಳು.

ಡಾಕ್ಟರ್ “ಚಿಂತೆಯಿಲ್ಲ, ಸುಮ್ಮನೆ ಕೊರಗ ಬೇಡಿ. ನಿಮ್ಮ ತಾತಂದಿರಿಗೆ ಇನ್ನೆರಡು ದಿನಗಳಲ್ಲಿ ಜ್ವರ ಇಳಿಯುವುದು. ನೀವು ಇದೀಗ ರೈಲಲ್ಲಿಬಂದು ಇಳಿದಂತೆ ಇದೆ. ನಮ್ಮ ಮನೆಗೆ ಬಂದು ಊಟಮಾಡಬಹುದು. ನಮ್ಮ ಮನೆ. ಅಗೋ ಅದೇ. ಬಹಳ ಹತ್ತಿರವಿದೆ. ಮುದುಕರಿಗೆ

ಗಂಜಿ, ನೀರು, ಎಲ್ಲ ನಮ್ಮ ಮನೆಯಿಂದಲೇ ಕಳಿಹಿಸುತ್ತಿದ್ದೇನೆ. ಇದೀಗ ನಾನು ಹೋಗಿ ನಮ್ಮಮ್ಮನನ್ನು ಕಳುಹಿಸುತ್ತೇನೆ. '' ಎಂದಂದು ಹೊರಟು ಹೋದರು. ಸೀತೆಗೆ ಮರುಮಾತು ಅನ್ನಲು ಸಹ ಅವರು ಅವಕಾಶ ಕೊಡಲಿಲ್ಲ.

ಈ ರೀತಿಯಾಗಿ ಮುದುಕರಿಗೆ ತಿಂಗಳುಗಟ್ಲೆ ಜ್ವರ ಹೊಡೆಯುತ್ತಿತ್ತು. ಆ ದಿಕ್ಕಿಲ್ಲದ ಸಂಸಾರಕ್ಕೆ ಡಾಕ್ಟರ್‌ರಂಗನಾಥನ್‌ರವರೂ, ಅವರ ತಾಯಿ ಲಕ್ಷ್ಮಮ್ಮನೂ ಕೈಲಾದ ಸಹಾಯ ಮಾಡುತ್ತಿದ್ದರು. ಕೊನೆಗೂ ಮುದುಕರು ಮರಣಹೊಂದಲು, ಸೀತಾಲಕ್ಷ್ಮಿಯ ದುಃಖಕ್ಕೆ ಇತಿ ಮಿತಿಯೇ ಇಲ್ಲದಂತಾಯಿತು. ದುಃಖಸಾಗರದಲ್ಲಿ ಮುಳುಗಿದ್ದ ಸೀತೆಗೆ ಮುದುಕರು ತೀರಿಕೊಂಡ ಎಂಟನೇಯ ದಿನವೇ ಹೆಣ್ಣುಮಗು ಹುಟ್ಟಿತು. ಸೇವಕ ಲಿಂಗನ ಹೆಂಡತಿ ಸಾತಿಯೇ ಸೀತೆಯ ಸಮೀಪದಲ್ಲಿ ಇದ್ದು, ಶುಶ್ರೂಷೆ ಮಾಡುತ್ತಿದ್ದಳು. ಲಕ್ಷ್ಮಮ್ಮನು ಗಂಜಿ, ಪಥ್ಯ, ಮೊದಲಾದುವನ್ನು ತಂದು ಒದಗಿಸುತ್ತಿದ್ದಳು. ಮಗು ಹುಟ್ಟಿ ತಿಂಗಳೊಳಗಾಗಿಯೇ ಡಾಕ್ಟರ್ ರಂಗನಾಥನ್‌ರವರಿಗೆ, ಶೇಲಂಗೆ ವರ್ಗವಾಯಿತು. ಸಮುದ್ರದಲ್ಲಿ ಬಿದ್ದು ತತ್ತರಿಸುವವನಿಗೆ ಮರದ ತುಂಡೊಂದು ಸಿಕ್ಕಂತಿದ್ದರು, ಸೀತೆಗೆ ಡಾಕ್ಟರ್ ಸಂಸಾರದವರು. ಈಗ ಶೇಲಂಗೆ ತೆರಳಬೇಕಾಗಿ ಬಂತು. ಇನ್ನು ಆ ಅಬಲೆಯ ಗತಿಯೇನು ? ತನ್ನ ಪ್ರತ್ಯಕ್ಷದೇವತೆಗಳಂತೆ ಇದ್ದ ಅವರೂ ಸಹ ತನ್ನನ್ನು ಒಂಟಿಯಾಗಿ ಪರಿತಪಿಸಲು ಬಿಟ್ಟು ಹೋಗ ಬೇಕಾಗಿದೆಯೆಂದು ಪೇಚಾಡಿದಳು. ಆಗ ದೇವರು ಲಕ್ಷ್ಮಮ್ಮನವರಿಗೆ ಒಂದು ಆಲೋಚನೆ ಹೊಳೆಯುವಂತೆ ಕರುಣಿಸಿದರು. ಲಕ್ಷ್ಮಮ್ಮನು ಸೀತೆಯ ಹತ್ತಿರ ಅತ್ಯಾದರದಿಂದ " ಸೀತಾ ನಾವು ಶೇಲಂಗೆ ಹೋಗಿ ಬಿಟ್ಟರೆ, ಈ ಊರಲ್ಲಿ ನಿನ್ನ ಕಷ್ಟ ಸುಖಕ್ಕೆ ನೆರವಾಗುವಂತಹವರು ಯಾರೂ ಕಾಣಲಿಲ್ಲ. ನೀನು ನಮ್ಮ ಸಂಗಡಲೇ ಶೇಲಂಗೆ ಬಂದು ಬಿಡು. ನಿನಗೆ ಕೊಂಚ ಬಲಬಂದ ಬಳಿಕ ನಮ್ಮ ಮನೆಯಹತ್ತಿರವೇ ಪ್ರತ್ಯೇಕವಾದೊಂದು ಮನೆಯನ್ನು ಏರ್ಪಡಿಸಿಕೊಂಡು ಅಲ್ಲೇ ಇದ್ದು ಬಿಟ್ಟರಾಯಿತು. ನನ್ನ ಮಗನೂ ಇದೇ ಏರ್ಪಾಟು ಸರಿ ಎನ್ನುತ್ತಾನೆ. ನಿನಗೆ ಯಾವಾಗಲೂ ನಮ್ಮ ಕೈಲಾದ ಸಹಾಯ ಮಾಡಲು ತಯಾರಿದ್ದೇವೆ'' ಎಂದಳು.

ಕಗ್ಗತ್ತಲೆ ಕವಿದು ಕೊಂಡಿದ್ದ ದಟ್ಟವಾದ ಅಡವಿಯಲ್ಲಿ ದಾರಿತಪ್ಪಿ ಅಲೆಯುತ್ತಿರುವವನೋರ್ವನಿಗೆ ಯಾವುದಾದರೊಂದು ಸಣ್ಣ ಬೆಳಕು ತೋರಿದಾಗ ಏರ್ಪಡುವಂತಹ ಆನಂದ ಸೀತೆಗೆ ಈ ಸವಿನುಡಿಗಳು ಕಲ್ಪಿಸಿದವು. ಚಿಂತೆಯೇ ಮೂರ್ತಿವತ್ತಾದ ಅವಳ ಮುಖದಲ್ಲೂ ನಸುನಗೆಯೊಂದು ಸುಳಿದು ಮಾಯವಾಯಿತು. ಅವಳು ಲಕ್ಷ್ಮಮ್ಮನನ್ನು ದೈನ್ಯತೆಯಿಂದ ಈಕ್ಷಿಸಿ, "ಮಾಮೀ. ನೀವೇನನ್ನ ಪರದೇವತೆ. ನೀವು ಹೇಳಿದಂತೆ ನಡೆಯಲು ಸಿದ್ಧಳಿದ್ದೇನೆ. ಪಾಪಿಯಾದ ನನಗೆ ಬೇರೆ ಏನುಗತಿ? ನೀವಲ್ಲದೆ ನನಗೆ ಬೇರೆ ಯಾರು ಒತ್ತಾಸೆ ಮಾಡುವವರು ಇದ್ದಾರೆ?" ಎಂದಳು. ಅಷ್ಟರ ಮೇಲೆ ಮಾತನಾಡಲಾರದೆ ಗಳಗಳನೆ ಕಣ್ಣೀರು ಸುರಿಸಿದಳು. ಮಡಿಲಲ್ಲಿ ಮಲಗಿದ್ದ ಮಗು ತಾಯಿಯ ಮುಖನೋಡಿ ನಗುತ್ತ ಆಟವಾಡಲು, ಎಂತಹ ಸಮಾಧಾನ, ಶಾಂತವಾಗದ ಅವಳ ತೀರದ ದುಃಖ ಕ್ಷಣ ಮಾತ್ರದಲ್ಲಿ ಮಾಯವಾಯಿತು ಮಗುವಿನ ನಗುವಿನಲ್ಲಿ ಲಯಿಸಿದ ಮಾತೆ ಕೊಂಚ ಹೊತ್ತು ತನ್ನ ದುಃಖವನ್ನು ಮರೆತಳು.

೪

ಶೇಲಂದ ತೇರಡಿ ತೆರುವು ಅಗ್ರಹಾರದಲ್ಲಿ ಸಣ್ಣದೊಂದು ಮನೆ. ಮನೆಯ ಮುಂಭಾಗದ ನಡುಮನೆಯಲ್ಲಿ ಒಂದೆರಡು ಕನ್ನಡಿ ಬೀರುಗಳೂ, ಒಂದು ಹೊಲಿಗೆಯ ಯಂತ್ರವೂ, ಎರಡು ಬೆಂಚುಗಳೂ ಇದ್ದವು. ಹೊಲಿಗೆಯ ಯಂತ್ರದ ಸಮೀಪದಲ್ಲಿ ಮೂವತ್ತೊಂದು ಪ್ರಾಯದ ನಾರಿಯೋರ್ವಳು ಏನನ್ನೋ ಹೊಲಿಯುತ್ತ ಕುಳಿತಿದ್ದಳು. ಪಕ್ಕದಲ್ಲೊಂದು ಚಾಪೆಯಲ್ಲಿ ಹದಿನೈದು ವರ್ಷದ ಹುಡುಗಿಯೊಬ್ಬಳು, ಜೋಳೀ ಒಂದಕ್ಕೆ ಕಸೂತಿ ಕೆಲಸ (ಎಂಬ್ರಾಯ್ಡರೀ) ಮಾಡುತ್ತ ಕುಳಿತಿದ್ದಳು. ಆ ಹುಡುಗಿಯ ತುಂಬುಗೆನ್ನೆಗಳೂ, ವಿಶಾಲಲಲಾಟವೂ, ಮುಖಕ್ಕೆ ಒಪ್ಪುವ ಮಾಟವಾದ ಮೂಗೂ, ಕಮಲ ಪುಷ್ಪದಲ್ಲಿ ಎರಡು ದುಂಬಿಗಳು ಕುಳಿತಿವೆಯೋ ಎಂಬಂತಹ ಚಂಚಲ ನಯನಗಳೂ, ಹವಳದಂತಹ ಕೆಂದುಟಿಗಳೂ, ಮುತ್ತಿನ ಸರ ಪೋಣಿಸಿದಂತಹ ಮುದ್ದಾದ ಹಲ್ಲುಗಳ ಸಾಲೂಗಳೂ,........ಆ ಹುಡುಗಿಯ ಚೆಲುವನ್ನು ಅತ್ಯಂತ ಮೇಧಾವಿ

ಯಾವ ಕವಿಯೂ ಸಹ ವರ್ಣಿಸಲು ಸಾಧ್ಯವಿಲ್ಲದೆ ಭ್ರಮಿಸುವಂತಿತ್ತು. ಆ ಹುಡುಗಿಯ ದಟ್ಟವಾದ ಮತ್ತು ನೀಳವಾದ ಜಡೆಯನ್ನು ಕಂಡಾಕ್ಷಣ, ಇವಳೇ ಅಲ್ಲವೇ ನಾಗವೇಣಿ! ಎಂಬುವಂತಿತ್ತು. ಆದರೂ, ಎಳೆಬಳ್ಳಿಯಂತಿದ್ದ ಆ ಬಾಲೆಯ ಮುಗ್ಧಮುಖದಲ್ಲಿ ಚಿಂತೆಯ ರೇಖೆ ತೋರುತ್ತಿತ್ತು.

ಆ ಕೊಠಡಿಯಲ್ಲಿದ್ದ ಕನ್ನಡೀ ಬೀರುಗಳಲ್ಲಿ ಕಸೂತಿ ಕೆಲಸವನ್ನು ಪ್ರದರ್ಶನಮಾಡುವಂತಹ ತರತರಹ ನಮೂನೆಯ ಚೋಳೀ ಮಾದರಿಗಳೂ ಲಂಗ, ಜಾಕೆಟ್, ದಿಂಬಿನ ಚೀಲ, ಟೇಬಲ್ ಕ್ಲಾತ್ ಮುಂತಾದವುಗಳು ಅಂದವಾಗಿ ಮಡಿಸಿಡಲ್ಪಟ್ಟಿದ್ದವು.

ಹೊಲಿಯುತ್ತ ಕುಳಿತಿದ್ದ ಆ ಬಾಲೆ ತನ್ನ ತಾಯಿಯನ್ನು ಕುರಿತು, "ಅಮ್ಮಾ, ನಿನ್ನೆ ಏನಾದರೂ ಗಿರಾಕಿ ಬಂತೇ? ಈ ತಿಂಗಳು ವ್ಯಾಪಾರ ಬಹು ಮೋಸವಾಗಿದೆಯಲ್ಲಾ?" ಎಂದು ಕೇಳಿದಳು.

"ಹೌದಮ್ಮಾ, ಹೌದು. ನಮಗೆ ಈಗ ಶೋಧನೆಯ ಸಮಯವೆಂದು ತೋರುತ್ತೆ. ಹೊಸ ವ್ಯಾಪಾರವೇ ಆಗಲಿಲ್ಲವೇದರೆ ಹಳೆಯ ಬಾಕೀ ಸಹ ಕೊಡಬೇಕಾದವರೂ ಕೂಡ ಒಬ್ಬರಾದರೂ ತಂದು ಕೊಡಲಿಲ್ಲ. ನಿನ್ನ ಸ್ಕೂಲು ಫೀಜಿಗೂ, ಮನೆಯ ಬಾಡಿಗೆಗೂ ಕಾಣುವಷ್ಟಾದರೂ ದುಡ್ಡು ಶೇಖರವಾದರೆ ಉಚಿತ. ದಿನದಿನಕ್ಕೆ ಜೀವನ ನಡೆಯಿಸುವುದೇ ಕಷ್ಟವಾಗಿದೆಯಲ್ಲಾ! ನಮ್ಮ ಜನ್ಮವೇ ಸುಖವನ್ನು ಕಂಡರಿಯದ ಜನ್ಮ" ಎಂದಂದು ಕಣ್ಣೀರಿಟ್ಟಳು ಆ ಹುಡುಗಿಯ ತಾಯಿ.

ತಾಯಿಯ ದುಃಖವನ್ನು ಕಂಡು ಮಗಳ ಕಣ್ಣುಗಳಲ್ಲೂ ಕಣ್ಣೀರು ಹೊಮ್ಮಿತು. "ಅಮ್ಮಾ, ನಾನು ಓದನ್ನು ನಿಲ್ಲಿಸಿ, ನಿನಗೆ ಹೊಲಿಗೆಯ ಕೆಲಸದಲ್ಲಿ ನೆರವಾಗುತ್ತೇನೆ. ನೀನು ಹಗಲಿರುಳೆನ್ನದೆ ದುಡಿದು ಸ್ಕೂಲು ಫೀಜು ಕೊಡಬೇಕು, ನಾನು ನಿಶ್ಚಿಂತಳಾಗಿ ಓದಬೇಕು ಎಂದರೇನು?" ಎಂದಳು.

ತಾಯಿಯು "ನನ್ನ ಬಂಗಾರ, ನೀನು ಹಾಗೆಲ್ಲ ಮಾಡಬಾರದು. ನೀನು ಓದಿ ಪ್ಯಾಸುಮಾಡಿ ಒಳ್ಳೆಯ ಹೆಸರುಗಳಿಸಿದರೆ, ನನಗೆ ಅದಕ್ಕಿಂತ ಸಂತೋಷ ತರಬಲ್ಲ ವಿಷಯ ಯಾವುದುಂಟು? ದೇವರು ಯಾವಾಗಲೂ ನಮ್ಮನ್ನು ಕೈ ಬಿಡಲಾರ. ಇಂದಿಲ್ಲದಿದ್ದರೆ ನಾಳೆ ಕರುಣಿಸುವನು. ದೇವರ ಮೇಲೆ

ಭಾರಹಾಕಿ ನೀನು ನಿನ್ನ ಕೆಲಸನೋಡು. ನಾನು ಹೋಗಿ ಸ್ನಾನಮಾಡಿ ಅಡಿಗೆಗೆ ಪ್ರಾರಂಭಿಸುತ್ತೇನೆ ಯಾರಾದರೂ ಬಂದರೆ ಕೊಂಚ ವಿಚಾರಿಸಿಕೊ ತಾಯೀ" ಎಂದಂದು ಹೊಲಿಗೆಯನ್ನು ಅಷ್ಟಕ್ಕೆ ನಿಲ್ಲಿಸಿ, ಅಂಗಳದ ಕಡೆ ಹೊರಟು ಹೋದಳು.

ಆಕೆಯೇ ಸೀತೆ; ಆ ಹುಡುಗಿ ಸೀತೆಯ ಮುದ್ದುಗುಮರಿ ಲಕ್ಷ್ಮಿ. ತನ್ನ ಆಪತ್ಕಾಲದಲ್ಲಿ ಅತ್ಯಂತ ಉಪಕಾರ ಮಾಡಿದ ಲಕ್ಷ್ಮಮ್ಮನ ಹೆಸರನ್ನೇ ತನ್ನ ಪುತ್ರಿಗೆ ನಾಮಕರಣ ಮಾಡಿದ್ದಳು ಸೀತಮ್ಮ. ಆಕೆ ಲಕ್ಷ್ಮಮ್ಮನ ಕೋರಿಕೆಯಂತೆಯೇ ಆ ಸಂಸಾರದ ಜೊತೆಗೆ ಶೇಲಂ ಬಂದು ಸೇರಿದಳು. ಮೈಯಲ್ಲಿ ಕೊಂಚ ತ್ರಾಣ ಬಂದಮೇಲೆ ಡಾಕ್ಟರ ಮನೆಯ ಸಮೀಪದಲ್ಲಿಯೇ ಎರಡು ಕೊಠಡಿಗಳನ್ನು ಬಾಡಿಗೆಗೆ ಏರ್ಪಡಿಸಿಕೊಂಡು ತನ್ನ ತಾತಂದಿರು ಇಟ್ಟುಹೋಗಿದ್ದ ಅಲ್ಪಸ್ವಲ್ಪ ಆಸ್ತಿನಲ್ಲಿ ಹೇಗೋ ಜೀವಿಸುತ್ತಿದ್ದಳು. ಆ ಅಲ್ಪ ಆಸ್ತಿಯೂ, ಕ್ರಮೇಣ ಕರಗುತ್ತ ಬರಲು ತನಗೆ ತಿಳಿದ ಹೊಲಿಗೆ, ಮತ್ತು ಕಸೂತಿ ಕೆಲಸದಲ್ಲಿದ್ದ ಹೆಚ್ಚಿನ ಪರಿಚಯದಿಂದ ನೆರೆಹೊರೆಯ ಹೆಣ್ಣು ಮಕ್ಕಳಿಗೆ ರವಿಕೆ, ಲಂಗ, ಅಂಗಿ ಮುಂತಾದುವನ್ನು ಹೊಲಿದು ಕೊಟ್ಟು, ಆ ಸಂಪಾದನೆಯಲ್ಲಿ ಬಾಳ್ವೆಯನ್ನು ನಡೆಯಿಸುವ ಉಪಾಯ ಹುಡುಕಿದಳು. ದಿನ ಕಳೆದಂತೆ ಗಿರಾಕಿಗಳೂ ಸುಮಾರಾಗಿ ಹೆಚ್ಚು ಹೆಚ್ಚಾಗಿ ಬರಲು ತೊಡಗಿದರು. ಕೆಲ ಹೆಂಗಸರು ಆಕೆಗೆ ಕಸೂತಿ ಕೆಲಸದಲ್ಲಿರುವ ಜಾಣ್ಮೆಯನ್ನು ಕಂಡು ಬೆರಗಾಗಿ ಅವಳ ಹತ್ತಿರಬಂದು ಕಸೂತಿ ವಿದ್ಯೆಯನ್ನು ಕಲಿಯಲು ಪ್ರಾರಂಭಿಸಿದರು. ಇದರಿಂದ ಸೀತೆಯಮನೆ ಹೊಲಿಗೆಯ ಶಾಲೆಯಾಗಿ ಮಾರ್ಪಟ್ಟಿತು. ಕೈಯಲ್ಲಿ ಕೊಂಚ ಹಣ ಸೇರಿದ ಮೇಲೆ ಅವಳು ಒಂದು ದೊಡ್ಡ ಹೊಲಿಗೆಯಂತ್ರ (Leg Machine) ಕೊಂಡಳು. ಅದರ ಮುಂದಿನ ವರ್ಷ ತನ್ನ ವಾಸವನ್ನು ಕೊಂಚ ದೊಡ್ಡದಾದ ಮನೆಗೆ ಬದಲಾಯಿಸಿಕೊಂಡಳು. ಶೇಲಂ ನಗರ ಸೀತೆಗೆ ಕೊಂಚ ಪಳಗುವುದರೊಳಗಾಗಿ ಡಾಕ್ಟರ್ ರಂಗನಾಥನ್‌ರವರಿಗೆ ಕೊಯಮತ್ತೂರಿಗೆ ವರ್ಗವಾಯಿತು. ಸೀತೆಗಂತೂ ತನ್ನ ಆತ್ಮಸ್ನೇಹಿತರುಗಳ ಅಗಲಿಕೆಯಿಂದ ಅತೀತ ವೇದನೆ ಏರ್ಪಟ್ಟಿತು. ಈ ಅಗಲಿಕೆಯಾದನಂತರ ಅವಳಿಗೂ ಡಾಕ್ಟರ್ ಕುಟುಂಬದ ಹೆಂಗಸರಿಗೂ ಪದೇ ಪದೇ ಪತ್ರವ್ಯವಹಾರ ನಡೆಯುತ್ತಿತ್ತು.

ಮಗು ಲಕ್ಷ್ಮಿ ದಿನದಿನಕ್ಕೆ ಶುಕ್ಲಪಕ್ಷದ ಚಂದ್ರನಂತೆ ಚೆನ್ನಾಗಿ ಬೆಳೆಯುತ್ತಿದ್ದಳು. ಅವಳಿಗೆ ಈಗ ಹದಿನೈದನೆಯ ವರ್ಷ. "ತಾಯಿಯಂತೆ ಮಗಳು, ನೂಲಿನಂತೆ ಸೀರೆ" ಎಂಬ ಗಾದೆಯಂತೆ ಸೀತೆಯ ಮಗಳು ಬಹಳ ಚುರುಕಾಗಿಯೂ, ಜಾಣೆಯಾಗಿಯೂ ಇದ್ದಳು. ಅವಳೀಗ ಎಸ್. ಎಸ್. ಎಲ್. ಸಿ. ತರಗತಿಯಲ್ಲಿ ಓದುತ್ತಿದ್ದಳು. ತನಗೆ ಬೇರೆ ಯಾವ ವಿಷಯವಲ್ಲೂ ದೇವರು ಅದೃಷ್ಟ ಕರುಣಿಸದಿದ್ದರೂ ಅಪೂರ್ವ ಸದ್ಗುಣ ಸಂಪನ್ನೆಯಾದ ಕನ್ಯಾರತ್ನವನ್ನು ಕರುಣಿಸಿರುವಕ್ಕಾಗಿ ಸೀತೆ ಪದೇ ಪದೇ ದೇವರನ್ನು ನೆನೆದು ವಂದಿಸುತ್ತಿದ್ದಳು.

ಸೀತೆಯು ಸ್ನಾನಕ್ಕೆ ಹೋದ ಐದು ನಿಮಿಷಗಳೊಳಗಾಗಿ ಅವರ ಮನೆಯ ಮುಂದೆ ಒಂದು ಜೋಡು ಕುದುರೆಯ ಗಾಡಿ (Coach) ಬಂದು ನಿಂತಿತು. ಅದರಲ್ಲಿ ಕುಳಿತಿದ್ದ ಮಧ್ಯವಯಸ್ಕಳಾದ ನಾರಿಯು ಮನೆಯ ಮುಂಭಾಗದಲ್ಲಿ ತೂಗುಹಾಕಿದ್ದ ಬೋರ್ಡಿನ ಅಕ್ಷರಗಳನ್ನು ಓದಿ ನೋಡಿದಳು. ಬಳಿಕ ಗಾಡಿಯಿಂದ ಇಳಿದು ಬಂದು ಮನೆಯೊಳಗೆ ಪ್ರವೇಶಿಸಿದಳು. ನಡುಮನೆಯಲ್ಲಿ ಕುಳಿತಿದ್ದ ಲಕ್ಷ್ಮಿಯನ್ನು ಕುರಿತು ಆಕೆ, "ಅಮ್ಮಾ ಮಗು. ಸೀತಾಲಕ್ಷ್ಮಮ್ಮನ ಮನೆ ಇದೇ ಅಲ್ಲವೇ?" ಎಂದು ವಿಚಾರಿಸಿದಳು.

ಲಕ್ಷ್ಮಿ, "ಹೌದು, ಸ್ವಾಮಿ" ಎಂದು ಸಭ್ಯವಾಗಿ ನುಡಿದಳು.

"ಅವರು ಮನೆಯಲ್ಲಿ ಇದ್ದಾರೆಯೋ?"

"ಹೌದು, ಮನೆಯಲ್ಲಿದ್ದಾರೆ. ಸ್ನಾನಕ್ಕೆ ಹೋಗಿದ್ದಾರೆ. ಬರುವ ಹೊತ್ತಾಯಿತು. ಕುಳಿತುಕೊಳ್ಳಿ, ಸ್ವಾಮೀ" ಎಂದು ಉಪಚರಿಸಿ ಅವಳ ಸಮೀಪದಲ್ಲೊಂದು ಕುರ್ಚಿಯನ್ನು ತಂದು ಹಾಕಿದಳು.

ಬಂದ ಹೆಂಗಸು ಕುರ್ಚಿಯಲ್ಲಿ ಕುಳಿತುಕೊಳ್ಳದೆ, ಅಲ್ಲಿದ್ದ ಬೀರುಗಳಲ್ಲಿ ಇರುವ ಬಟ್ಟೆಗಳ ಕಸೂತಿ ಕೆಲಸಗಳನ್ನೂ, ಅವುಗಳ ಅಂದಚಂದವನ್ನೂ ಕುತೂಹಲದಿಂದ ನೋಡುತ್ತಿದ್ದಳು. "ಅಮ್ಮಾ, ಮಗು ಇಷ್ಟನ್ನೂ ನಿಮ್ಮ ತಾಯಿಯೇ ಹೊಲಿದರೇನು? ಏನಾಶ್ಚರ್ಯ? ಎಷ್ಟು ನಾಜೂಕಾಗಿವೆ! ಎಷ್ಟೊಂದು ಅಚ್ಚುಕಟ್ಟಾಗಿ, ವರ್ಣವೈವಿಧ್ಯಗಳನ್ನು ಅಂದವಾಗಿ ಹೊಂದಿಸಿ, ಬಹಳ ಸೂಕ್ಷ್ಮವಾಗಿ ಹೊಲಿದಿದ್ದಾರೆ! ಯಂತ್ರದಲ್ಲಿ

ಮಾಡಿದ 'ಎಂಬ್ರಾಯ್ಡರಿ'ಯೋ ಎಂಬಂತಿದೆ. ಓಹೋಹೋ ಈ ಕುಸುರಿನ (ಸಿಟ್ಟಿಂಗ್) ಕೆಲಸ ಬಲು ಜೋಕಾಗಿದೆ, ನಾನು ಈ ಮೊದಲು ಇಂತಹ ನಾಜೂಕಾದ 'ಕ್ರೋಷಾ' ಕೆಲಸ ಕಂಡಿರಲೇ ಇಲ್ಲ. ನಿನಗೂ, ಈ ನಾಜೂಕು ಕೆಲಸಗಳೆಲ್ಲ ಬರುತ್ತವೇ?" ಎಂದು ಪ್ರಿಯವಾಗಿ ಕೇಳಿದಳು.

"ನೀವೀಗ ಕೈಯಲ್ಲಿ ಹಿಡಿದಿರುವ ಜಾಕೆಟ್ಟಿಗೆ ನಾನೇ ಎಂಬ್ರಾಯ್ಡರಿ ಮಾಡಿರುವುದು. ಆದರೆ ಅಮ್ಮನಷ್ಟು ಹೊಲಿಯಲು ನನ್ನಿಂದಾಗದು. ನಾನು ಸ್ಕೂಲಿಗೆ ಹೋಗಬೇಕಾಗಿದೆ. ಸಂಗೀತ ಅಭ್ಯಾಸ ಬೇರೆಮಾಡಬೇಕಾಗಿದೆ. ಏನೋ ಕೊಂಚ ವಿರಾಮ ದೊರಕಿದಾಗ ಹೊಲಿಯುತ್ತೇನೆ. ಅಷ್ಟೆ"

"ಅಮ್ಮಮ್ಮಾ! ನಿನ್ನ ಹೊಲಿಗೆಯ ಕೈವಾಡ ನಿನ್ನ ತಾಯಿಯವರನ್ನೂ ಸೋಲಿಸುವಂತಿದೆ! ಇಷ್ಟೊಂದು ಚಿಕ್ಕಂದಿನಲ್ಲೇ ನೀನು ಬಹಳ ಜಾಣೆಯಾಗಿರುವೆಯಲ್ಲಾ! ಈ ಜಾಕೆಟ್ಟನ್ನು ನಮ್ಮ ವಿಜಯಳಿಗೆ ಕೊಂಡುಕೊಂಡು ಹೋಗುವೆನು." ಎಂದನ್ನುತ್ತಿರುವಾಗ ಸೀತಮ್ಮ ಅಲ್ಲಿಗೆ ಬಂದಳು.

ಸೀತಮ್ಮ ಬಂದಿರುವ ಹೆಂಗಸನ್ನು ವಂದಿಸಿ, "ನಮಸ್ಕಾರ ಕುಳಿತುಕೊಳ್ಳಿ. ಇದೇನು? ಈ ಬಡವಳ ಮನೆಗೆ ಭಾಗ್ಯದೇವತೆಯಂತೆ ಬಂದಿರುವಿರಿ?" ಎಂದು ಮರ್ಯಾದೆಯಾಗಿ ನುಡಿದಳು.

"ಕೆಲವು ಬಟ್ಟೆಗಳನ್ನು ಹೊಲಿಸ ಬೇಕೆಂದು ಬಂದೆನಷ್ಟೆ. ನೀವು ರವಿಕೆ, ಸೀರೆ ಮೊದಲಾದುವುಗಳಿಗೆ ಕಡಿಮೆ ಚಾರ್ಜಿನಲ್ಲಿ ಬಹಳ ಅಂದವಾಗಿ ಕಸೂತಿ ಕೆಲಸ ಮಾಡಿಕೊಡುತ್ತೀರೆಂದು ನನಗೆ ತಿಳಿದು ಬಂತು. ಆದುದರಿಂದ. ನಿಮ್ಮ ಅಡ್ರೆಸ್ ವಿಚಾರಿಸಿ ತಿಳಿದುಕೊಂಡು, ನಿಮ್ಮ ಮನೆಯನ್ನು ಹುಡುಕಿಕೊಂಡು ಬಂದೆ. ನಿಜವಾಗಿಯೂ ನಿಮ್ಮ ಕಸೂತಿ ಕೆಲಸಗಳು ಬಹಳ ಸುಂದರವಾಗಿವೆ. ಕಳೆದ ದಸರಾ ಮಹೋತ್ಸವ ಕಾಲದಲ್ಲಿ ಮೈಸೂರಿನ ಅಖಿಲ ಭಾರತ ವಸ್ತು ಪ್ರದರ್ಶನದಲ್ಲಿ ನಿಮ್ಮ ಕಸೂತಿ ಕೆಲಸದ ಚಾಕಚಕ್ಯತೆಗೆ ಚಿನ್ನದ ಪದಕ ಬಹುಮಾನವಾಗಿ ದೊರಕಿತಂತೆ?" ಎಂದು ಆದರದಿಂದ ಉಪಚಾರೋಕ್ತಿಗಳನ್ನು ನುಡಿದಳು.

ಸೀತಮ್ಮ ಸ್ವಲ್ಪ ಸಂಕೋಚದಿಂದ, “ ಹೌದು, ಅದಕ್ಕಾಗಿ ತಾವು ನನ್ನನ್ನು ಪ್ರಮಾದವಾಗಿ ಹೊಗಳಲು, ನಾನು ಅರ್ಹತೆಪಡೆದಿಲ್ಲ. ” ಎಂದು ಸಭ್ಯವಾಗಿ ಪ್ರತ್ಯುತ್ತರವಿತ್ತಳು.

“ಹಾಗಲ್ಲ. ತಮ್ಮ ಕೆಲಸದ ಕೈವಾಡವನ್ನು ಹೊಗಳಲು ನನಗೆ ಸಾಕಷ್ಟು ಜಾಣತನ ಇಲ್ಲವೆಂದು ಹೇಳಿದರೆ ಒಪ್ಪುವೆನು. ಈ ಸಲವೂ ಏನಾದರೂ ಹೊಸ ನಮೂನೆಯ ಕೆಲಸಗಳನ್ನು ಮೈಸೂರಿಗೆ ಕಳುಹಿಸುವ ಉದ್ದೇಶವಿದೆಯೇನು ? ” ಎಂದು ಕೇಳುತ್ತ ಆ ಜೀರುವಲ್ಲಿದ್ದ ಸಾಮಾನುಗಳನ್ನು ನೋಡತೊಡಗಿದಳು.

ಸೀತಮ್ಮ, “ ಅಲ್ಲಿಂದ ಕಳುಹಿಸಿಕೊಡಬೇಕೆಂದು ಕಾಗದವಂತೂ ಬಂದಿದೆ. ಐವತ್ತು ಅರುವತ್ತು ಬಟ್ಟೆಗಳನ್ನು ಕಳುಹೋಣವೆಂದಿದ್ದೇನೆ. ಮದರಾಸಿನ ಸ್ವದೇಶೀ ಎಗ್ಸಿಬಿಷನಿನಲ್ಲೂ, ಬೆಂಗಳೂರಿನ ಸ್ವದೇಶೀ ಎಗ್ಸಿಬಿಷನಿನಲ್ಲೂ ಈ ವರ್ಷ ಎರಡು ಚಿನ್ನದ ಪದಕಗಳು ಬಂದಿವೆ. ಎಲ್ಲವೂ ತಮ್ಮಂತಹ ಹಿರಿಯರ ಆಶೀರ್ವಾದ. ಜಾಕೆಟ್ಟಿನ ಅಳತೆಯನ್ನೂ ಯಾವುದಕ್ಕೆ ಯಾವ ನಮೂನೆಯ ಎಂಬ್ರಾಯ್ಡರೀ ಮಾಡಬೇಕೆಂಬುದನ್ನೂ ಇಲ್ಲಿರುವ ಕೆಲಸಗಳಲ್ಲಿ ಆರಿಸಿ, ತೋರಿಸಿದರೆ, ಆದಷ್ಟು ಬೇಗನೆ ಹೊಲಿದು ಕೊಡುತ್ತೇನೆ ” ಎಂದಳು.

“ ನಾನು ಆರಿಸುವುದಕ್ಕಿಂತ ನೀವೇ ಕೆಲವು ಸುಂದರವಾದ ಕಸೂತಿಗಳನ್ನು ತೆಗೆದು ತೋರಿಸಿ ” ಎಂದಳು ಆ ಶ್ರೀಮಂತ ನಾರಿ ಸರಸ್ವತಮ್ಮ.

ಸೀತಮ್ಮ “ ಇಗೋ, ಇದು ಸಾಧಾರಣ ಕಸೂತಿ (Plain Embroidery) ಇದು ಕುಸುರಿನ ಕೆಲಸ ( Shadow work ) ಇದು ಅಡ್ಡ ಹೊಲಿಗೆ ಕೆಲಸ (Cross-stitch)........ ಎಂದು ವಿವರಿಸುತ್ತಾ ತರತರದ ಮನೋಹರವಾದ ಕಸೂತಿ ಕೆಲಸದ ನಮೂನೆಗಳನ್ನು ತೆಗೆದು, ಮೇಜಿನ ತುಂಬ ಹರಡಿಬಿಟ್ಟಳು. ಸರಸ್ವತಮ್ಮನಿಗೆ ಎಲ್ಲವೂ ಬೇಕೆನಿಸಿತು. ಯಾವುದನ್ನೂ ಆರಿಸುವುದೆಂದು ಬಗೆಹರಿಯದೆ ಸುಮ್ಮನೆ ನಿಂತಳು. ಬಳಿಕ ಎಲ್ಲವನ್ನೂ ಹತ್ತಿಪ್ಪತ್ತು ಸಲ ತಿರುವಿ ತಿರುವಿ ನೋಡಿದಳು. ಕೊನೆಗೆ “ ನೀವೇ ಯಾವುದಾದರೂ ಹೊಲಿದುಕೊಟ್ಟರೆ ಸಾಕು. ನನ್ನಿಂದ ಆರಿಸಲು ಸಾಧ್ಯವಿಲ್ಲ. ನನಗೆ ಎಲ್ಲವೂ ಚೆನ್ನಾಗಿಯೆ

ಇವೆ. ನಿಮಗೆ ಬಹಳ ಶ್ರಮ ಕೊಟ್ಟೆ. ನಿಮ್ಮ ಮಗಳು ಬಹಳ ಜಾಣೆ. ಇವಳನ್ನು ಕಂಡರೆ ನಮ್ಮ ವಿಜಯ ಬಿಡಳು. ಸಂಜೆಗಾಡಿ ಕಳುಹಿಸುತ್ತೇನೆ. ಹುಡುಗಿಯನ್ನು ಕರೆದುಕೊಂಡು ನಮ್ಮ ಮನೆಗೆ ಬರಬೇಕು" ಎಂದು ಬಹಳ ನಯವಾಗಿ ಆಹ್ವಾನಿಸಿದಳು.

ಸೀತೆಗಂತೂ ಆನಂದವೂ ಆಶ್ಚರ್ಯವೂ ಒಟ್ಟಿಗೆ ಉಕ್ಕಿ ಬಂದುವು. "ನಮ್ಮನ್ನು ಇಷ್ಟು ಅಕ್ಕರೆಯಾಗಿ ಕರೆಯುವವರು ಯಾರಿರುವರು? ಹುಡುಗಿಯನ್ನು ಕಳುಹಿಕೊಡಲು ಆಕ್ಷೇಪಣೆಯಿಲ್ಲ. ಆದರೆ ಸಂಜೆಯ ಹೊತ್ತಿನಲ್ಲಿ ನಾನು ಅಂಗಡಿಯನ್ನು ಬಿಟ್ಟುಬರಲು ಸಾಧ್ಯವಿಲ್ಲ. ತಾವು ಅನ್ಯಥಾ ಭಾವಿಸಬಾರದು. ತಮ್ಮ ಅಡ್ರೆಸನ್ನು ನಾನು ತಿಳಿಯಬಹುದೇ? ಸರಸ್ವತಮ್ಮ?"

"ತಮ್ಮ ಸೌಕರ್ಯವಿದ್ದಂತೆ ಆಗಲಿ. ನಮ್ಮ ಅಡ್ರೆಸ್ ಕೇರಾಫ್, ಎಸ್. ಮಹಾದೇವನ್, ಬಾರ್-ಅಟ್-ಲಾ ಶಿವಸ್ವಾಮಿಪುರಂ. ನಿಮ್ಮ ಹುಡುಗಿಗೆ ತಿಂಗಳಿಗೆ ಹದಿನ್ನೈದು ರೂಪಾಯಿಗಳು ಕೊಡಲು ತಯಾರಿದ್ದೇನೆ. ಪ್ರತಿನಿತ್ಯ ಸಂಜೆ ಗಾಡಿ ಕಳುಹಿಸುತ್ತೇನೆ. ನಮ್ಮ ಮನೆಗೆ ಬಂದು ನಮ್ಮ ಹುಡುಗಿಯೊಡನೆ ಆಟವಾಡಿಕೊಂಡಿದ್ದು ಅವಳಿಗೆ ಕೊಂಚ ಕಸೂತಿ ಹೇಳಿ ಕೊಟ್ಟು ಹೋಗಲು ಸಾಧ್ಯವೇ?"

ಸೀತಮ್ಮನು ಸಂತೋಷವ್ಯಕ್ತಗೊಳಿಸುತ್ತ "ಹಾಗೇ ಮಾಡಲಿ, ಏನೀಗ? ನಿಮ್ಮ ದಯೆಯೊಂದು ಇದ್ದರೆ ಸಾಕು. ಎಂದಂದು, ಲಕ್ಷ್ಮೀ! ನೀನು ಏನನ್ನುವಿ?" ಎಂದು ತನ್ನ ಮಗಳನ್ನು ಕೇಳಿದಳು.

ಲಕ್ಷ್ಮೀ ಸುಮುಖವಾಗಿ, ಆಗಬಹುದೆಂದು ತಲೆಯಾಡಿಸಿದಳು.

"ನನ್ನದೊಂದು ಕೋರಿಕೆ. ಹುಡುಗಿಯನ್ನು ಕತ್ತಲೆಗೆ ಮುಂಚಿತವಾಗಿ ಮನೆಗೆ ಕಳುಹಿಕೊಟ್ಟರೆ, ನಾನು ನಿರ್ವಿಚಾರವಾಗಿ ಇರಬಲ್ಲೆ" ಎಂದು ಸೀತಮ್ಮ ಕೇಳಿಕೊಂಡಳು.

"ಆರು-ಆರೂವರೆ ಘಂಟೆಯೊಳಗಾಗಿ ಕಳುಹಿಸುತ್ತೇನೆ. ಸಾಕೇ?" ಎಂದಳು ಸರಸ್ವತಮ್ಮ.

ಸೀತಮ್ಮನೂ, ಲಕ್ಷ್ಮಿಯೂ ಆಗಲೆಂದು ಒಪ್ಪಲು ಸರಸ್ವತಮ್ಮನು ಅವರ ಹತ್ತಿರ ಅಪ್ಪಣೆ ಪಡೆದು ಹುಡುಗಿಯ ಬೆನ್ನುತಟ್ಟಿ, ಗಲ್ಲಸವರಿ, ತನ್ನ

ಗಾಡಿಯಲ್ಲಿ ಕುಳಿತು ಹೊರಟು ಹೋದಳು.

* * * *

ಇತ್ತ ತಾಯಿ ಮಗಳಿಬ್ಬರೂ ತಮ್ಮ ಕಷ್ಟ ಕಾಲದಲ್ಲಿ ಒತ್ತಾಸೆ ಮಾಡುವುದಕ್ಕೆಂದೇ ದೇವರು ಈ ಶ್ರೀಮಂತರಮಣಿಯನ್ನು ಕಳುಹಿಸಿರುವ ರೆಂದು ಅಂದುಕೊಂಡು ಹಿಗ್ಗಿದರು. ಮಿತಿಮೀರಿದ ಸಂತೋಷದಿಂದ ಅವರ ಬಾಯಲ್ಲಿ ಮಾತೇ ಹೊರಡದಂತಾಯಿತು. ಮೌನವಾಗಿ ಒಬ್ಬ ರನ್ನೊಬ್ಬರು ನೋಡುತ್ತ ಸ್ವಲ್ಪಹೊತ್ತು ಸುಮ್ಮನೆ ನಿಂತಿದ್ದರು. ಅಂದು ಭಾನುವಾರ. ಲಕ್ಷ್ಮಿ ಮತ್ತೆ ಚಾಪೆಯ ಮೇಲೆ ಕುಳಿತು ಸಾವಕಾಶವಾಗಿ ಹೊಲಿಯಲು ಪ್ರಾರಂಭಿಸಿದಳು. ಅವಳ ವಿಶಾಲವಾದ ಕಣ್ಣುಗಳೂ, ಕೈಗಳೂ ಹೊಲಿಗೆಯ ಕೆಲಸದಲ್ಲಿ ಲಯವಾಗಿದ್ದವೇ ಹೊರತು, ಅವಳ ಮನಸ್ಸು ಹಲವು ಯೋಚನೆಗಳಿಂದ ಕಲಕಿ ಹೋಗಿದ್ದಿತು. ಆ ಮುಗ್ಧ ಹುಡುಗಿಯ ನಿರ್ಮಲವಾದ ಮನಸ್ಸು ತಾನಿನ್ನು ತನ್ನ ಮಾತೆಗೆ ಸಂಪಾದಿಸಿ ತರುವೆನೆಂಬ ಆನಂದದಿಂದಲೂ ಹೆಮ್ಮೆಯಿಂದಲೂ ಆಹ್ಲಾದ ಹೊಂದಿತ್ತು. ಆ ಹೊತ್ತು, ಆ ಬಾಲೆ ಬಹಳ ಸಡಗರದಿಂದ ಕೆಲಸಗಳನ್ನು ಮಾಡ ತೊಡಗಿದಳು. "ಆ ದೊಡ್ಡ ಮನುಷ್ಯರ ಮನೆಗೆ ಯಾವ ಸೀರೆಯನ್ನು ಉಟ್ಟುಕೊಂಡು ಹೋಗಲಿ? ನನ್ನ ನೂತನ ಗೆಳತಿಯೊಡನೆ ಮೊಟ್ಟಮೊದಲು ಏನೆಂದು ಮಾತು ಪ್ರಾರಂಭಿಸುವುದು?...........ಅವರು ಬಹಳ ದೊಡ್ಡ ಮನುಷ್ಯರೆಂದು ಕಾಣುತ್ತದೆಯಲ್ಲಾ!........ಅವರ ಜೊತೆಯಲ್ಲಿ ಹೇಗೆ ವರ್ತಿಸಬೇಕು?"........ಎಂಬಂತಹ ಪರಿಪರಿಯಾದ ಚಿಂತೆಗಳು ಅವಳ ಹೂಮನಸ್ಸಿನಲ್ಲಿ ಒಂದರ ಹಿಂದೊಂದು ಮೂಡಿಕೊಂಡು ಮಾಯವಾದುವು. ತನ್ನ ಕೈಯಲ್ಲಿದ್ದ ಹೊಲಿಗೆಯ ಕೆಲಸವನ್ನು ಅಷ್ಟಕ್ಕೇ ನಿಲ್ಲಿಸಿ, ಅಲ್ಲಿಂದ ಎದ್ದುಹೋಗಿ ತನ್ನ ಪೆಟ್ಟಿಗೆಯನ್ನು ತೆರೆದು ಒಂದೊಂದು ಸೀರೆಯನ್ನಾಗಿ ತೆಗೆದು ನೋಡಿದಳು. ಅವಳ ಹತ್ತಿರ ಇದ್ದದ್ದು ಒಂದೇ ಒಂದು ಕೆಂಪು ರೇಷ್ಮೆಯ ಸೀರೆ. ಆ ಸಿಲ್ಕ್ ಸೀರೆಯನ್ನುಟ್ಟು, ಅದಕ್ಕೆ ಒಪ್ಪವಾದ ನಸುಗೆಂಪಿನ ಕುಪ್ಪುಸವನ್ನು (Blouse) ತೊಟ್ಟುಕೊಳ್ಳುವುದೆಂದು ಕೊನೆಗೆ ತೀರ್ಮಾನಿಸಿದಳು.

ಹಗಲು ಊಟವಾದೊಡನೆ ಅಮ್ಮನಿಗೆ ಒತ್ತಾಸೆಯಾಗಿ ಚಿಲ್ಲರೆ ಕೆಲಸ

ಗಳನ್ನು ಮಾಡಿ ಮುಗಿಸಿದ ಬಳಿಕ, ಸ್ಕೂಲಿನ ಪಾಠಗಳನ್ನು ಶ್ರದ್ಧೆಯಿಂದ ಮಾಡಿದಳು. ಆ ಹೊತ್ತು ಆ ಬಾಲೆಯ ಮುಖಾರವಿಂದವು ಎಂದಿಲ್ಲದ ಸೊಬಗಿನಿಂದ ಬೆಳಗಿತು ಓದು ಮುಗಿದ ಬಳಿಕ. ಮನೆಯ ಹಿತ್ತಲಲ್ಲಿ ತಾನು ಪೈರುಮಾಡಿದ ಕೈದೋಟದಿಂದ ಕನಕಾಂಬರ ಪುಷ್ಪಗಳನ್ನು ಬಿಡಿಸಿ ತಂದು ಅಂದವಾಗಿ ಎರಡು ಚೆಂಡುಗಳು ಕಟ್ಟಿದಳು.

ಘಂಟೆ ಮೂರು ಹೊಡೆಯುವುದರೊಳಗಾಗಿ ಒಲೆ ಹೊತ್ತಿಸಿ ಟೀ, ತಯಾರಿಸಿ ತಾಯಿಹತ್ತಿರ ತಂದಿಡಲು ಸೀತಮ್ಮನು "ಇದೇನೇ ಲಕ್ಷ್ಮೀ! ಇಷ್ಟರೊಳಗಾಗಿ ಟೀ, ತಂದೆ? ಘಂಟೆ ಇನ್ನೂ ಎರಡೂ ಮುಕ್ಕಾಲು!" ಎಂದು ಆಶ್ಚರ್ಯದಿಂದ ಕೇಳಿದಳು.

ಲಕ್ಷ್ಮಿ ನಾಚುತ್ತ, "ಮಾವಿ ಗಾಡಿ ಕಳುಹಿಸುವುದರೊಳಗಾಗಿ ಕೆಲಸವನ್ನೆಲ್ಲ ಮುಗಿಸಿಕೊಂಡು ಡೆಸ್ ಬದಲಾಯಿಸಿಕೊಂಡು 'ರೆಡಿ' ಯಾಗಿರೋಣವೆಂದು ಬೇಗ ಟೀ ಹಾಕಿದೆ" ಎಂದಂದು ಅಲ್ಲಿಂದ ಸರಿದಳು. ಸೀತಮ್ಮನ ಮುಖದಲ್ಲಿ ಮೆಲುನಗೆ ಮೂಡಿತು. "ಪಾಪ, ಮಗು. ಈವರೆಗೂ ಗೂಡಲ್ಲಿ ಸೆರೆಹಾಕಿದ ಗಿಣಿಯಂತೆ ಮನೆಬಿಟ್ಟರೆ ಸ್ಕೂಲು, ಸ್ಕೂಲು ಬಿಟ್ಟರೆ ಮನೆಯೆಂದು ಇದ್ದಳು. ಈ ದಿನ ಇವಳ ಉತ್ಸಾಹ ಹೇಳತೀರದು. ಇನ್ನಾದರೂ ದೇವರು ನಮ್ಮ ಮೇಲೆ ಕಟಾಕ್ಷ ಬೀರಲಿ" ಎಂದು ದೇವರನ್ನು ಪ್ರಾರ್ಥಿಸುತ್ತ ಏನನ್ನೋ ಹೊಲಿಯುತ್ತಿದ್ದಳು.

ಲಕ್ಷ್ಮಿ, ಕಾಫೀ ಒಲೆಯಲ್ಲೇ ಬೇಳೆಗೆ ಎಸರಿಟ್ಟು, ಪಾತ್ರೆಗಳನ್ನೆಲ್ಲಾ ಶುಭ್ರವಾಗಿ ತೊಳೆದು ತಂದು ಗೂಡಲ್ಲಿ ಬೋರಲು ಹಾಕಿ, ಡ್ರೆಸ್ ಮಾಡಿಕೊಂಡಳು. ಆ ವೇಳೆಗೆ ಗಾಡಿಯೂ ಬಂತು. ಆ ಹುಡುಗಿ ಅದರ ಮೊದಲು ಕೋಚ್ (Coach) ಗಾಡಿಯನ್ನು ಹತ್ತಿದವಳೇ ಅಲ್ಲ. ಗಾಡಿಯಲ್ಲಿ ಹತ್ತಿ ಕುಳಿತಾಕ್ಷಣ ಆನಂದದಿಂದ, ಮೈ 'ಝುಂ' ಎಂದಿತವಳಿಗೆ.

ಸೀತಮ್ಮ ಬೀದಿಯ ಬಾಗಿಲಲ್ಲಿ ಬಂದು ನಿಂತಳು. "ಲಕ್ಷ್ಮೀ, ಬೇಗ ಬಂದುಬಿಡು" ಎಂದು ಆದರದಿಂದ ನುಡಿಯಲು ಲಕ್ಷ್ಮಿಯೂ ಸಹ ಆಗಲೆಂದು ತಲೆದೂಗಿದಳು. ಗಾಡಿ ಹೊರಟಿತು.

೫

ಹಗಲು ಹನ್ನೆರಡು ಘಂಟೆಯ ಸಮಯ. ಸರಸ ಮಹಾಲಿನ ನಡುಮನೆಯಲ್ಲಿ ( **Hall** ) ಸರಸ್ವತಮ್ಮನು ಚಾಪೆಯೊಂದರಲ್ಲಿ ಕುಳಿತು ತಾಂಬೂಲ ಸವಿಯುತ್ತ ' ಸ್ವದೇಶ ಮಿತ್ರನ್ ' ದಿನಪತ್ರಿಕೆಯನ್ನು ತಿರವುತ್ತಿದ್ದಳು. ಆಗ, ಪಕ್ಕದ ಕೊಠಡಿಯಲ್ಲಿದ್ದ ಅವಳ ಪುತ್ರಿ ವಿಜಯ " ಅಮ್ಮಾ, ಬೆಳಿಗ್ಗೆ ನನಗೆ ಏನೋ ಕೊಂಡುತಂದಿರುವೆನೆಂದೆಲ್ಲಾ ? ಎಲ್ಲಿ ? " ಎಂದು ಕೇಳಿದಳು.

ಸರಸ್ವತಮ್ಮನು ಎದ್ದುಬಂದು ಮೇಜಿನ ಡ್ರಾಯರೊಂದನ್ನು ಎಳೆದು ಅದರಲ್ಲಿದ್ದ ಕಾಗದದ ಸುರುಳಿಯನ್ನು ತಂದು ವಿಜಯಳ ಕೈಗಿತ್ತಳು. ನ್ಯೂಮೋನಿಯಾ ಜ್ವರದಿಂದ ಒಂದು ತಿಂಗಳಿಂದ ಪೀಡಿಸಲ್ಪಟ್ಟು ಇದೇ ತಾನೇ ಜ್ವರ ಇಳಿದು ಚೇತರಿಸಿಕೊಳ್ಳುತ್ತಿದ್ದ ವಿಜಯ ಬಲಹೀನವಾದ ಕೈಗಳಿಂದ ಪುಡಿಕೆಯನ್ನು ಬಿಚ್ಚಿ ನೋಡಿದಳು ಅದರಲ್ಲಿ ಅತ್ಯಂತ ಆಕರ್ಷಣೀಯವಾಗಿ ' ಎಂಬ್ರಾಯ್ಡರಿ ' ಮಾಡಿದ್ದ ಎರಡು ರೇಶಿಮೆ ಬ್ಲೌಸುಗಳು ( Silk Blouses ) ಇದ್ದುವು. ಅವಳಿಗಂತೂ ಅವನ್ನು ಕಂಡು ಬಹಳ ಇಷ್ಟವಾಯಿತು. " ಅಮ್ಮಾ ಇಷ್ಟೊಂದು ಚೆನ್ನಾದ ಬ್ಲೌಸುಗಳು ನಿನಗೆಲ್ಲಿ ಸಿಕ್ಕಿದವು " ಎಂದು ಉತ್ಸುಕಳಾಗಿ ಕೇಳಿದಳು.

ಸರಸ್ವತಮ್ಮನು " ನಿನ್ನ ಸಮವಯಸ್ಸಿನ ಹುಡುಗಿಯೊಬ್ಬಳು ಹೊಲಿದಿದ್ದಾಳೆ, ಆ ಹುಡುಗಿ ಅದೆಷ್ಟು ಜಾಣೆಗೊತ್ತೆ ? "

ವಿಜಯ " ಅಮ್ಮಾ ನಾನು ಆ ಹುಡುಗಿಯನ್ನು ನೋಡಬೇಕಲ್ಲಾ ! ನಮ್ಮ ಮನೆಗೆ ಕರೆಸಲು ಸಾಧ್ಯವೇ ? "

ಸರಸ್ವತಿ " ಈ ಹೊತ್ತು ಸಂಜೆ ಅವಳನ್ನುಬರಹೇಳಿದ್ದೇನೆ. ಪಾಪ ! ಅವಳೂ, ಅವಳ ತಾಯಿಯೂ ಮಾತ್ರವೇ ಒಂಟಿಯಾಗಿ ಜೀವಿಸುತ್ತಿದ್ದಾರೆ ಎಂದು ಕೇಳಿದೆ. ಇಬ್ಬರೂ ಬಹಳ ಒಳ್ಳೆಯವರು. ಹುಡುಗಿಯ ಹೆಸರು ಲಕ್ಷ್ಮಿ. ಇಬ್ಬರೂ ಬಹಳ ಜಾಣರು. ಅದೆಷ್ಟು ಮರ್ಯಾದೆ, ಅದೆಷ್ಟು ವಿನಯ ! ಅದೆಷ್ಟು ಸೌಜನ್ಯ! ಅವರಿಬ್ಬರ ಕಸೂತಿ ಕೆಲಸದ ಕೈವಾಡವನ್ನು ಕಂಡು ಬೆಕ್ಕಸಬೆರಗಾದೆ. ಬಹಳ ಅಚ್ಚುಕಟ್ಟಾದ ಕೆಲಸ. ಅವರುಗಳ ಕಸೂತಿ ಕೆಲಸವನ್ನು ಮೆಚ್ಚಿ ಇತ್ತ ಅನೇಕ ಚಿನ್ನದ ಪದಕಗಳೂ,

ಸರ್ಟಿಫಿಕೇಟುಗಳೂ ಅವರಲ್ಲಿವೆ. ಈ ಹೊತ್ತಿನಿಂದ ಆ ಹುಡುಗಿಯನ್ನು ಪ್ರತಿನಿತ್ಯ ಸಂಜೆ ನಿನ್ನೊಡನೆ ಮಾತನಾಡಿಕೊಂಡಿರಲು ಬರ ಹೇಳಿದ್ದೇನೆ. ಹಾಗೆಯೇ ನಿನಗೆ ಕೊಂಚ ಎಂಬ್ರಾಯ್ಡರೀ, ನಿಟ್ಟಿಂಗ್ ಎಲ್ಲ ಕಲಿಸ ಬೇಕೆಂದು ಹೇಳಿಬಂದಿದ್ದೇನೆ. ”

ಸರಸ್ವತಮ್ಮನು ಈ ರೀತಿಯಾಗಿ ಅವರುಗಳನ್ನು ಕುರಿತು ಬಹಳ ಹೊತ್ತು ಹೊಗಳುತ್ತಲಿದ್ದಳು, ಬಳಿಕ ವಿಜಯಳು ಕೊಂಚ ವಿಶ್ರ ಮಿಸಿಕೊಳ್ಳಲೆಂದು, ತಾನೂ ತನ್ನ ಕೊಠಡಿಗೆ ಮಲಗಲು ಹೊರಟು ಹೋದಳು. ಆದರೆ, ಆ ಮಧ್ಯಾಹ್ನ ವಿಜಯಳಿಗೆ ನಿದ್ರೆಯೇ ಹತ್ತಲಿಲ್ಲ. ಸಂಜೆ ಬೇಗ ಸಮೀಪಿಸಬಾರದೇ ಎಂದು ಇದಿರು ನೋಡುತ್ತ ಹಾಸಿಗೆಯಲ್ಲಿ ಹೊರಳುತ್ತ ಇದ್ದಳು. ಅವಳ ಮನಸ್ಸೆಲ್ಲವೂ ತನಗೆ ದೊರಕಲಿರುವ ಹೊಸ ಗೆಳತಿಯನ್ನು ಕುರಿತು ಯೋಚಿಸುತ್ತಿತ್ತು. ಅವಳು ಬಂದರೆ ಏನೇನು ಮಾತನಾಡಬೇಕು, ಎಂತೆಂತಹ ಹೊಲಿಗೆ ಕಲಿಯಬೇಕು ಎಂಬಂತಹ ಯೋಚನೆಗಳಲ್ಲೇ ಮಗ್ನಳಾಗಿದ್ದಳು ವಿಜಯ

ಪ್ರತಿನಿತ್ಯಮಧ್ಯಾಹ್ನ ಒಂದೂವರೆ ಘಂಟೆಗೆ ಅವಳ ತಾಯಿಯು ತಂದು ಕೊಡುವ ಕಿತ್ತಳೆಯ ಹಣ್ಣಿನ ರಸವನ್ನು ರುಚಿಯಾಗಿ ಸವಿದು ಒಂದು ಘಂಟೆ ಚಪ್ಪರಿಸುತ್ತ ಕುಡಿಯುವವಳು ಆ ಹೊತ್ತು ಗಟಕ್ ಎಂದು ಒಂದೇ ಗುಟುಕಿನಲ್ಲಿ ಕುಡಿದು ಬಿಟ್ಟಳು. ಡಾಕ್ಟರು ಸಂಜೆ ನಾಲ್ಕು ಘಂಟೆಯ ಮೇಲೆ ಸ್ವಲ್ಪ ಹೊತ್ತು ಕುರ್ಚಿಯಲ್ಲಿ ಕುಳಿತುಕೊಳ್ಳಬಹು ದೆಂದು ಹೇಳಿದ್ದರು. ವಿಜಯ ನಾಲ್ಕುಘಂಟೆ ಹೊಡೆಯುವವರೆಗೂ ಕಾದಿರುವಳು. ಸರಸ್ವತಮ್ಮನು ಮೆಲ್ಲಗೆ ಅವಳನ್ನು ಕರೆತಂದು ಕುರ್ಚಿಯಲ್ಲಿ ಕುಳ್ಳಿರಿಸುವದು ವಾಡಿಕೆ. ಆದರೆ ಆ ದಿನ ವಿಜಯ ಅದನ್ನೂ ಮರೆತಳು. ಇದನ್ನೆಲ್ಲ ಕಂಡು ಅವಳ ತಾಯಿಗೆ ಆಶ್ಚರ್ಯವೋ ಆಶ್ಚರ್ಯ.

ಕೋಚ್‌ಮೇನ್ ಮುನಿಸ್ವಾಮಿ ಗಾಡಿಯನ್ನು ಲಕ್ಷ್ಮಿಯ ಮನೆಗೆ ಓಡಿಸಿಕೊಂಡು ಒರುವಾಗ ತೋಟದ ರಸ್ತೆಯಲ್ಲಿ ಕುದುರೆಯ ಕಾಲ ಸಪ್ಪಳ ಕೇಳಿಬಂತು. ವಿಜಯಳಿಗೆ ಆನಂದ ಉಕ್ಕಿತು. ಇನ್ನು ಕೆಲವು ನಿಮಿಷಗಳೊಳಗಾಗಿ ತನ್ನ ಹೊಸ ಗೆಳತಿಯನ್ನು ಕಾಣುವೆನೆಂಬ ಹಿಗ್ಗು ವಿಜ ಯಳಿಗೆ ಎಲ್ಲಿ ಇಲ್ಲದ ಹೊಸ ಆನಂದವನ್ನು ತಂದೊಡ್ಡಿತು. ಲಕ್ಷ್ಮಿಹತ್ತಿಬಂದ

ಗಾಡಿಯು ಸರಸಮುಹಾಲಿನ ಕಾಂಪೌಂಡಿನ ರಮಣೀಯವಾದ ಹೂದೋಟ ದೊಳಗೆ ನುಗ್ಗಿತು. ಗ್ರಾವಲ್ ರಸ್ತೆಯ ಇಕ್ಕಡೆಗಳಲ್ಲೂ ಒಂದೇಸವನೆ ಕತ್ತರಿಸಿ ಬೆಳೆಸಿದ ಹಚ್ಚನೆಯ ಹುಲ್ಲು ಹಾಸಿಗೆ. ನಡುನಡುವೆ ಪೂರ್ಣ ಪುಷ್ಪಿತ ಗಿಡಗಳು ರಮ್ಯವಾಗಿ ಕಂಗೊಳಿಸಿದುವು. ತೋಟದ ಕಾಂಪೌಂಡ್ ಗೋಡೆಯ ಓರೆಯಾಗಿ ಸಂಪಿಗೆ, ಮಂದಾರೆ, ಸುರಗಿ, ಪಾರಿಜಾತ, ಮೊದ ಲಾದ ಪುಷ್ಪಗಿಡಗಳೂ ಬೆಳೆಸಲ್ಪಟ್ಟಿದ್ದವು. ಅಲ್ಲದೆ, ಬಂಗಲೆಯ ಹಿತ್ತಲ ತರಕಾರೀ ತೋಟವೂ, ಹಣ್ಣು ಹಂಪಲಗಿಡಮರ ಬಳ್ಳಿಗಳೂ ಮುಂಭಾಗ ದಿಂದ ತಿಳಿದೂ ತಿಳಿಯದೆ ತೋರುತ್ತಿರುವ ಅಂದಚೆಂದವನ್ನೂ ಇದುವರೆಗೆ ಲಕ್ಷ್ಮಿ ಕಂಡವಳಲ್ಲ. ಈ ಸೊಬಗನ್ನೆಲ್ಲ ಕಂಡ ಲಕ್ಷ್ಮಿಗೆ ಮೈ ಮರೆಯುವಂತೆನಿಸಿತು. ತಾನು ದೇವಲೋಕದಲ್ಲಿರುವೆನೋ, ಭೂಲೋಕ ದಲ್ಲೇ ಇಂತಹ ಅದ್ಭುತವನ್ನು ಕಾಣುತ್ತಿರುವೆನೋ ಎಂದವಳಿಗೆ ಸಂಶಯ ವೇರ್ಪಟ್ಟದುವರಲ್ಲಿ ಅತಿಶಯವೇನೂ ಇಲ್ಲ. ಆ ಹೂದೋಟದಿಂದ ಸುಳಿವ ಸುಗಂಧ ಮಾರುತವು ಆ ಚೆಲುವೆಯನ್ನು ಆಲಂಗಿಸಲು ಅವಳಿಗೊಂದು ಹೊಸ ಸುಖಾನುಭವವಾಯಿತು.

ಆ ವೇಳೆಗೆ ಗಾಡಿಯು ಬಂಗಲೆಯ ಮುಂಬಾಗದಲ್ಲಿ ಬಂದು ನಿಂತಿತು. ಗಾಡಿಯಿಂದಿಳಿದ ಲಕ್ಷ್ಮಿಯು ಲಜ್ಜೆಯಿಂದ ಹಿಂಜರಿಯುತ್ತ ಮೆಲ್ಲಗೆ ಬಂಗಲೆಯ ನಡುಮನೆಯನ್ನು ಸೇರಿದಳು.

ಆ ನಡುಮನೆ ಬೆಲೆಬಾಳುವ ಸೋಫಾಗಳಿಂದಲೂ, ಥಳಥಳಿಸುವ ಕರೀಮರದ ಮೇಜುಗಳಿಂದಲೂ ಅಲಂಕೃತವಾಗಿತ್ತು.

ನೆಲದಲ್ಲಿ ಬೆಲೆ ಬಾಳುವ ರತ್ನಕಂಬಳಿಯೊಂದು ಹಾಸಿದ್ದಿತು. ಬಾಗಿಲು ಗಳಿಗೂ, ಕಿಟಕಿಗಳಿಗೂ, ಬಣ್ಣಬಣ್ಣದ ಹೂಗಳು ಅಚ್ಚುಹಾಕಿದ ವಾಯಿಲ್ ಬಟ್ಟೆಗಳ ತೆರೆಗಳು ತೂಗುಹಾಕಲ್ಪಟ್ಟಿದ್ದುವು ಸುಂದರವಾದ ಸಣ್ಣ ಮೇಜುಗಳ ಮೇಲೆ ಹೂಜಿಗಳು, ಹೂದಾನಿಗಳು ( Vases ) ಅತಿ ಸುಂದರವಾದ ಪ್ರತಿಮೆಗಳೂ ಅಲಂಕಾರವಾಗಿ ಇಡಲ್ಪಟ್ಟಿದ್ದುವು. ಸರಸ್ವ ತಮ್ಮನು ಬಂದು ಲಕ್ಷ್ಮಿಯ ಕೈಯನ್ನು ಆದರದಿಂದ ಹಿಡಿದು ಮಗಳ ಕೊಠಡಿಗೆ ಕರೆದೊಯ್ಯುತ್ತ “ಬಾಮ್ಮಾ, ಮಗು. ನಮ್ಮ ವಿಜಯ ನಿನಗಾಗಿ ಮಧ್ಯಾಹ್ನದಿಂದಲೂ ದಾರಿ ಕಾಯುತ್ತ ಕುಳಿತಿದ್ದಾಳೆ” ಎಂದಂದಳು.

ತನ್ನ ಕೋಣೆಯಲ್ಲಿ ಆರಾಮ ಕುರ್ಚಿಯೊಂದರಲ್ಲಿ ಕುಳಿತಿದ್ದ ವಿಜಯಳು ಲಕ್ಷ್ಮಿಯನ್ನು ಕಂಡೊಡನೆಯೇ ಆಶ್ಚರ್ಯದಿಂದ "ಅಮ್ಮಾ, ಇವಳು ನಮ್ಮ ಸ್ಕೂಲಲ್ಲಿ ಎಸ್. ಎಸ್. ಎಲ್. ಸಿ. ಕ್ಲಾಸಿನಲ್ಲಿ ಓದು ತ್ತಿರುವ ಲಕ್ಷ್ಮಿ! ಬೇರೆಯಾರೋ ಎಂದೆಂದುಕೊಂಡಿದ್ದೆ. ಬಾ, ಲಕ್ಷ್ಮಿ, ಕುಳಿತುಕೋ" ಎಂದು ತನ್ನಸಮೀಪದಲ್ಲಿದ್ದ ಕುರ್ಚಿಯೊಂದನ್ನು ತೋರಿಸಿದಳು. ವಿಜಯಳ ಮಾತನ್ನು ಕೇಳಿದ ಸರಸ್ವತಮ್ಮ, "ಆದರೆ ನೀವಿಬ್ಬರೂ ಮೊದಲೇ ಗೆಳತಿಯರೇನು? ಈ ಸಂಗತಿ ನನಗೆ ತಿಳಿಯದೇ ಹೋಯಿತಲ್ಲಾ!" ಎಂದಳು.

"ಇಲ್ಲ. ನಾವಿಬ್ಬರೂ ಇದುವರೆವಿಗೆ ಒಬ್ಬರಿಗೊಬ್ಬರು ಮಾತನಾಡಿರಲಿಲ್ಲ. ಇಬ್ಬರೂ ಒಂದೇ ಸ್ಕೂಲಿನಲ್ಲಿ ಓದುತ್ತಿರುವುದರಿಂದ ಒಬ್ಬರ ಮುಖದ ಗುರುತು ಮತ್ತೊಬ್ಬರಿಗುಂಟು, ಅಷ್ಟೇ. ಇನ್ನು ಮೇಲೆ ನಾವಿಬ್ಬರೂ ಅತ್ಯಂತ ಸ್ನೇಹಿತರಲ್ಲವೇ ವಿಜಯಾ?" ಎಂದು ಆ ವೇಗದಲ್ಲಿ ಲಕ್ಷ್ಮಿ ವಿನಯದಿಂದ ಹೇಳಿದಳು.

"ಹೌದು, ನನಗೂ ನಿನ್ನ ಸ್ನೇಹ ಮಾಡಿಕೊಳ್ಳಬೇಕೆಂದು ಬಹಳ ದಿನಗಳಿಂದ ಆಸೆಇತ್ತು. ಈ ದಿನ ಕೈಗೂಡಿತು."

"ಮಾಮೀ, ವಿಜಯಳಿಗೆ ಏನಾಗಿತ್ತು? ಇಷ್ಟೊಂದು ಬಡವಾಗಿ ಬಿಟ್ಟಿರುವಳಲ್ಲಾ! ಅದೇ ಮತ್ತೆ ಇಷ್ಟು ದಿನಗಳಾಗಿ ಇವಳು ಸ್ಕೂಲಲ್ಲಿ ಕಾಣಿಸಲಿಲ್ಲ."

"ಆ ಕಷ್ಟವನ್ನು ಏನೆಂದು ಹೇಳಲಿ. ಇಪ್ಪತ್ತೆರಡು ದಿನಗಳು ಬಿಡದೆ ಜ್ವರ ಹೊಡೆಯಿತು. ಎಷ್ಟೋ ಔಷಧ, ಪಥ್ಯಗಳಾದ ಮೇಲೆ ಇದೀಗ ಕೊಂಚ ವಾಸಿ. ಇನ್ನು ಮೇಲೆ ಅವಳಿಗೆ ಆಯಾಸ ತೋರದಂತೆ, ಉತ್ಸಾಹ ಪಡಿಸಿ, ಅವಳನ್ನು ಹುರುಪುಗೊಳಿಸಿ ಒಬ್ಬ ಹುಡುಗಿಯನ್ನಾಗಿ ಮಾಡುವ ಭಾರನಿನ್ನದು. ನಾನು ಹೋಗಿ ನಿನಗಿಷ್ಟು ತಿಂಡಿತೀರ್ಥ ತರುತ್ತೇನೆ" ಎಂದು ಸರಸ್ವತಮ್ಮ ಹೇಳಿದಳು.

ಲಕ್ಷ್ಮಿ ಮೆಲುದನಿಯಲ್ಲಿ, "ನನಗೆ ಈಗ ಏನೂ ಬೇಕಿಲ್ಲ, ಮಾಮೀ, ನಿಮ್ಮ ಪ್ರೇಮವೇ ನನಗೆ ತಿಂಡೀ, ತೀರ್ಥ ಎಲ್ಲ" ಎಂದಳು.

"ಲೇ ಜಾಣಮರಿ! ಏನೆಂದರೂ ನೀನು ಬಹಳ ಜಾಣೆ. ಒಂದೊಂದು ಮಾತನ್ನೂ ಎಷ್ಟು ಚೆನ್ನಾಗಿ ಅನ್ನುವಿ!"

“ ಅವಳು ಒಳ್ಳೆಯಹೆಸರು ಗಳಿಸದ ಸ್ಥಳವಿಲ್ಲ. ಅವ್ಮಾ! ಅವಳ ಜಾಣತನಕ್ಕೆ ಏನು ಕಡಿಮೆ! ನನಗಿಂತ ಅವಳು ಒಂದು ವರ್ಷ ಚಿಕ್ಕವಳು, ಆದರೂ ಕೂಡ ನನಗಿಂತ ಒಂದು ಕ್ಲಾಸ್ ಮೇಲೆ ಓದುತ್ತಿದ್ದಾಳೆ. ”

“ ಇಗೋ ಬಂದೆ. ನೀವಿಬ್ಬರೂ ಮಾತನಾಡುತ್ತಿರಿ ” ಎಂದೆಂದು ಅಡಿಗೆಯ ಮನೆಯ ಕಡೆಗೆ ಹೊರಟುಹೋದಳು. ಹುಡುಗಿಯರಿಬ್ಬರೂ ತಮ್ಮ ಶಾಲೆಯ ವಿಷಯವಾಗಿ ಮಾತನಾಡಿಕೊಳ್ಳುತ್ತ ಕುಳಿತರು.

ಆ ಹೊತ್ತು ವಿಜಯಳ ಹೃದಯವು ಹುರುಪುಗೊಂಡಿದುದರಿಂದ ಅವಳ ಸಪ್ಪೆ ಮುಖದಲ್ಲಿ ಒಂದು ರೀತಿಯ ಪ್ರಕಾಶ ಉದ್ಭವಿಸಿತ್ತು. ಸರಸ್ವತಮ್ಮನ ಅಪ್ಪಣೆಯಂತೆ ಅಡಿಗೆಯುವನು ತಂದು ಮೇಜಿನಮೇಲಿಟ್ಟು ಹೋದ ತಿನಿಸುಗಳನ್ನು ಸಂಕೋಚದಿಂದ ‘ ಬೇಡ, ಬೇಡ ’ ವೆನ್ನುತ್ತ ಲಕ್ಷ್ಮಿ ತಿಂದು ಮುಗಿಸಿ, ಟೀಯನ್ನೂ ರುಚಿ ನೋಡಿದಳು. ಬಳಿಕ ಆರೂವರೆ ಘಂಟೆಯವರೆಗೆ ವಿಜಯಳೊಡನೆ ಮಾತನಾಡುತ್ತಿದ್ದು, ಅವರ ಮನೆಯ ಗಾಡಿಯಲ್ಲೇ ತನ್ನಮನೆಗೆ ಹಿಂದಿರುಗಿದಳು.

೭

ಈ ರೀತಿಯಾಗಿ ದಿನವಹಿ ಲಕ್ಷ್ಮಿ ಬಂದು ಹೋಗುವುದರಿಂದ ವಿಜಯಳ ಮನಸ್ಸಿಗೆ ಕೊಂಚ ಉತ್ಸಾಹವೂ ಶಾಂತಿಯೂ ಏರ್ಪಟ್ಟವು. ಈ ಕಾರಣ ದಿಂದ ಅವಳ ದೇಹಸ್ಥಿತಿಯು ಉತ್ತಮಗೊಳ್ಳಲು ಪ್ರಾರಂಭಿಸಿತು. ಆ ಖಾಯಿಲೆ ಹುಡುಗಿಗೆ ಜೊತೆಗಾರ್ತಿ ಅವಶ್ಯಕವಾಗಿ ಬೇಕಿತ್ತು. ಅಷ್ಟೊಂದು ದೊಡ್ಡ ಬಂಗಲೆಯಲ್ಲಿ ಅವಳೊಬ್ಬಳ ಹೊರತಾಗಿ ಅವಳ ತಾಯಿತಂದೆಯ ರಿಬ್ಬರು ಮಾತ್ರವೇ ಇದ್ದರು. ಸಾಲದುದಕ್ಕೆ ಒಂದು ತಿಂಗಳಿಂದ ಖಾಯಲೆ ಯಾಗಿ ಮಲಗಿದ್ದುದರಿಂದ ಸ್ಕೂಲಿಗಾಗಲೀ, ಟಾಕೀಗಾಗಲಿ ಎಲ್ಲಿಗೂ ಹೋಗಲಾರದೆ ಮಲಗಿದ್ದುದರಿಂದ ಪಾಪ ಆ ಹುಡುಗಿಗೆ ಬಹಳ ಬೇಸರ ವಾಗಿತ್ತು. ದಿನವೆಲ್ಲ, ತನ್ನ ತಾಯಿತಂದೆ, ಮನೆಯ ಆಳುಗಳು............ ಇಲ್ಲದಿದ್ದರೆ ಡಾಕ್ಟರ್ ಇಷ್ಟು ಮಂದಿಯ ಹೊರತಾಗಿ ಬೇರೆ ಯಾರನ್ನೂ ಕಾಣುತ್ತಿರಲಿಲ್ಲವೆನ್ನಿ. ಯಾರಿಗೇ ಆಗಲೀ ತಮ್ಮ ಸಮವಯಸ್ಕ ರೊಡನೆ ಕೊಂಚಕಾಲ ಉಲ್ಲಾಸವಾಗಿ ಮಾತನಾಡಿಕೊಂಡಿರುವುದರಿಂದ

ಏರ್ಪಡುವಂತಹ ಸುಖಾನುಭವವು ಮತ್ತೆ ಯಾವ ಬೆಲೆ ಬಾಳುವ ಅಪೂರ್ವ ವಸ್ತುವಿನಿಂದಲೂ ಸಿಗುವುದಿಲ್ಲ. ಲಕ್ಷ್ಮಿ ಬಂದು ಹೋಗಲು ತೊಡಗಿದಾಗಿನಿಂದ ವಿಜಯಳ ಖಾಯಿಲೆ ಸೂರ್ಯನನ್ನು ಕಂಡ ಮಂಜಿನಂತೆ ಕಡಿಮೆಯಾಗತೊಡಗಿತು. ಉತ್ಸಾಹಹೊಂದಿದವಳಾಗಿ, ಅವಳ ಮೈಯಲ್ಲಿ ಕ್ರಮೇಣ ಶಕ್ತಿ ಊರಲು ಪ್ರಾರಂಭವಾಯಿತು. ಲಕ್ಷ್ಮಿ ಎಲ್ಲರಂತೆ, ವಿಜಯಳಿಗೆ ಗೆಳತಿ ಮಾತ್ರವೇ ಆಗಿರಲಿಲ್ಲ; ಸಮಯ ಸಂದರ್ಭಾನುಸಾರವಾಗಿ ಅವಳಿಗೆ ತಾಯಿಯಂತೆಯೂ ಗೆಳತಿಯಂತೆಯೂ, ಉಪಾಧ್ಯಾಯಿನಿ ಯಂತೆಯೂ, ಒಡಹುಟ್ಟಿದ ಸಹೋದರಿಯಂತೆಯೂ ಇರುತ್ತ ವಿಜಯಳ ಪರಿಪೂರ್ಣ ಪ್ರೇಮಕ್ಕೆ ಪಾತ್ರಳಾಗಿದ್ದಳು.

ವಿಜಯಳು, ಲಕ್ಷ್ಮಿಯಷ್ಟು ಚುರುಕು ಸ್ವಭಾವದವಳಲ್ಲ; ಮೇಲೆ ಶ್ರೀಮಂತರ ಮಗಳು. ಅವಳ ಉಡಿಗೆ ತೊಡಿಗೆಗಳನ್ನೂ, ಪುಸ್ತಕ ಮುಂತಾದುಗಳನ್ನೂ ಆಳುಗಳೇ ಚೊಕ್ಕಟವಾಗಿರಿಸಬೇಕಿತ್ತು. ಅವಳ ಸೋಮಾರಿತನವನ್ನು ಕಂಡು ಹೆತ್ತವರೇ ಎಷ್ಟೋಸಲ ಅವಳನ್ನು ಖಂಡಿಸಿದ್ದರು. ಲಕ್ಷ್ಮಿ ಬಂದಮೇಲೆ ವಿಜಯಳ ಕೊಠಡಿ ಒಂದು ದಿನವಾದರೂ ಅಸ್ತವ್ಯಸ್ತವಾಗಿರಲಿಲ್ಲ. ಯಾವಾಗಲೂ ಶುಭ್ರವಾಗಿಯೂ, ಅಂದವಾಗಿಯೂ ಇರುವುದನ್ನು ಕಂಡು ವಿಜಯಳ ತಾಯಿತಂದೆಯರಿಗೆ ಅತ್ಯಾಶ್ಚರ್ಯವಾಯಿತು.

ದಿನವೂ, ಮನೆಯಿಂದ ಬರುವಾಗ ಲಕ್ಷ್ಮಿ ಬಗೆಬಗೆಯ ಹೂವಿನ ಚೆಂಡು ( ವೇಣಿ ) ಗಳನ್ನು ಕಟ್ಟಿ ತರುವಳು. ಅವಳು ವಿಜಯಳ ಕೊಠಡಿಯೊಳಗೆ ಪ್ರವೇಶಿಸಿದೊಡನೆ ಮೊದಲ ಕೆಲಸವೇನಂದರೆ, ಆ ಕೊಠಡಿಯನ್ನು ಚೊಕ್ಕಟಮಾಡಿ ಕಂಡ ಕಂಡಲ್ಲಿ ಬಿದ್ದಿರುವ ಸಾಮಾನುಗಳನ್ನೂ ಆಯಾ ಸ್ಥಳದಲ್ಲಿ ತೆಗೆದಿಟ್ಟು ಮೇಜಿನ ಬಟ್ಟೆಯನ್ನು ಕೊಡವಿಹಾಸಿ, ಪುಸ್ತಕಗಳನ್ನು ಧೂಳುತಟ್ಟಿ ಜೋಡಿಸುವುದು. ಹಿಂದಿನ ದಿನ ಹೂದಾನಿಗಳಲ್ಲಿ ( Vase ) ಇಟ್ಟಿದ್ದ ಬಾಡಿದ ಹೂಗಳನ್ನು ತೆಗೆದು ಬಿಸುಟು ತೋಟದಿಂದ ಒಳ್ಳೊಳ್ಳೆಯ ನೂತನ ಪುಷ್ಪಗಳನ್ನೂ ಬಿಡಿಸಿ ತಂದು ಅದರಲ್ಲಿ ವರ್ಣ ವೈವಿಧ್ಯತೆಗಳಿಗನುಸಾರವಾಗಿ ನೋಡಲು ಆಕರ್ಷಣೀಯವಾಗಿ ಜೋಡಿಸಿಡುವುದು. ಆ ಬಳಿಕ ವಿಜಯಳೊಡನೆ ಪಗಡೆ, ಕೇರಂ,

ಇಸ್ಪೇಟ್, ಏನಾದರೂ ಆಟವಾಡುವುದು ಅಥವಾ ತಮಾಷೆಯಾಗಿ ಮಾತ ನಾಡುವುದು ಅವಳ ವಾಡಿಕೆ. ಅವಳೊಡನೆ ಮಾತನಾಡುವ ವೇಳೆಯನ್ನು ಸಹ ವ್ಯಥಾ ಕಳೆಯದೆ ಮನೆಯಿಂದ ಏನಾದರೊಂದು ಕಸೂತಿ ಕೆಲಸವನ್ನು ತಂದು ಕಸೂತಿ ಹಾಕುತ್ತಲೇ ಮಾತನಾಡುವುದು ವಾಡಿಕೆ. ಇದನ್ನೆಲ್ಲ ಕಂಡು ವಿಜಯಳಿಗೂ ಅವಳನ್ನು ಹೆತ್ತವರಿಗೂ ಬಹಳ ಆಶ್ಚರ್ಯ.

ವಿಜಯಳಿಗೆ ಮಾತು, ಆಟ, ಇವೆಲ್ಲ ಬೇಸರವಾದರೆ ಲಕ್ಷ್ಮಿಯನ್ನು ಸ್ವಲ್ಪ ಹೊತ್ತು ಹಾಡ ಹೇಳುವಳು. ಲಕ್ಷ್ಮಿಯ ತವರುಮನೆಯವರು ಸಂಗೀತದಲ್ಲಿ ವಿಶಾರದರು. ಸೀತಮ್ಮನು ಕರ್ನಾಟಕ ಸಂಗೀತದ ಪ್ರವೀಣೆ. ಅದಕ್ಕೆ ತಕ್ಕಂತೆ ಸೀತಮ್ಮನ ಧ್ವನಿ ಬಹಳ ಇಂಪು. ತಂಬೂ ರಾವನ್ನು ಶೃತಿಗೂಡಿಸುತ್ತ ಅದರೊಂದಿಗೆ ಹಾಡಲು ಪ್ರಾರಂಭಿಸಿದಳೆಂದರೆ ಕರ್ಣಾಮೃತವಾಗಿರುವುದು. ತಾಯಿಯಂತೆಯೇ ಲಕ್ಷ್ಮಿಯದೂ ಒಳ್ಳೆಯ ಶಾರೀರ; ಸಂಗೀತ ಜ್ಞಾನವೂ ಇತ್ತು. ಸೀತಮ್ಮ ತನ್ನ ಕುವರಿಗೆ ತಾನೇ ಉಪಾಧ್ಯಾಯಿನಿಯಾಗಿ, ಬಾಯಿಹಾಡುಗಾರಿಕೆಯೂ, ವೀಣೆಯನ್ನು ಕಲಿ ಸಿದ್ದಳು. ಲಕ್ಷ್ಮಿಯ ಸಂಗೀತ ವಿದ್ವತ್ತನ್ನೂ ಅವಳಿಗೆ ಅದರಲ್ಲಿರುವ ಅಪಾರ ಜ್ಞಾನವನ್ನೂ ಕಂಡು ಸರಸ್ವತಮ್ಮನು ತನ್ನ ಮಗಳಿಗೆ ಹಾಡು ಕಲಿಸಲು ಅವಳನ್ನೇ ಏರ್ಪಾಟು ಮಾಡಿದಳು. ಲಕ್ಷ್ಮಿಗೆ ಈಗ ತಿಂಗಳು ತಿಂಗಳು ಇನ್ನೂ ಹತ್ತು ರೂಪಾಯಿಗಳು ಸೇರಿಸಿ ಕೊಡಲು ಪ್ರಾರಂಭಿ ಸಿದಳು. ವಿಜಯ ಹಾಡು, ಹಸೆ, ಹೊಲಿಗೆ ಮೊದಲಾದ ಎಲ್ಲ ಲಲಿತಕಲೆ ಗಳನ್ನೂ ಲಕ್ಷ್ಮಿಯ ಹತ್ತಿರವೇ ಕಲಿತಳೆನ್ನಿ. ಅವರಿಬ್ಬರೂ ಎರಡು ದೇಹಗಳು ಒಂದು ಜೀವವೆಂಬಂತೆ ಅತ್ಯಂತ ಅನ್ಯೋನ್ಯವಾಗಿ ಬೆಳೆಯತೊಡಗಿದರು. ವಿಜಯಳೀಗ ತಕ್ಕಮಟ್ಟಿಗೆ ಓಡಾಡುವಂತಾದಳು. ಇದಕ್ಕೆಲ್ಲ ಲಕ್ಷ್ಮಿಯೇ ಕಾರಣಳೆಂದು ಸರಸ್ವತಮ್ಮ ಪದೇಪದೇ ಅವಳನ್ನು ಹೊಗಳುತ್ತಿದ್ದರು.

ವಿಜಯ ಆ ಹೊತ್ತು ಅತ್ಯಂತ ಕುತೂಹಲಳಾಗಿ ತೋರ್ಪಟ್ಟಳು. ಬೇಸಿಗೆಯ ರಜೆ ಪ್ರಾರಂಭವಾಗಿತ್ತು. ಶಾಲೆ ಇಲ್ಲದುದರಿಂದ ಈಗೀಗ ಲಕ್ಷ್ಮಿಯನ್ನು ವಿಜಯ ಸಂಜೆ ನಾಲ್ಕು ಘಂಟೆಗೆಲ್ಲಾ ಗಾಡಿ ಕಳುಹಿಸಿ ಕರೆಸಿಕೊಳ್ಳುತ್ತಿದ್ದಳು. ಲಕ್ಷ್ಮಿಗೆ ಗಾಡಿ ಕಳುಹಿಸಿ, ಆ ಹೊತ್ತು ವಿಜಯ ಒಳಗೂ ಹೊರಗೂ ಅಲೆದಾಡತೊಡಗಿದಳು. ಗಾಡಿ ಕಳುಹಿಸಿ ಬಹಳ

ಹೊತ್ತಾದಂತೆ ತೋರಿತು. ಆವಳಿಗೆ "ಬಹುಶಃ ಲಕ್ಷ್ಮಿಗೆ ಜ್ವರವಿರಬಹುದೇ?....ಇಲ್ಲ.... ಈ ಹೊತ್ತು ಬರಲಾಗಲಿಲ್ಲವೆಂದು ಹೇಳಿಬಿಟ್ಟಳೋ? ಮುನಿಯ ಅಲ್ಲಿಂದ ಜೇರೆಲ್ಲಿಗಾದರೂ ಗಾಡಿಯನ್ನು ಓಡಿಸಿಕೊಂಡು ಹೋಗಿರಬಹುದೋ?...." ಎಂದು ಚಿಂತಿಸತೊಡಗಿದಳು. ಈ ಯೋಚನೆ ವಿಜಯಳ ಮನಸ್ಸಿನಲ್ಲಿ ಆಗುತ್ತಿದ್ದ ಕಳವಳದ ಪರಿಣಾಮವಾಗಿತ್ತು.

ಲಕ್ಷ್ಮಿಯಂತೂ ಪ್ರತಿನಿತ್ಯದಂತೆಯೇ ಮುನಿಯ ಗಾಡಿ ತಂದೊಡನೆ ತಡಮಾಡದೆ ಬಂದುಬಿಟ್ಟಳು. ಮುನಿಯನೂ ಎಂದಿನಂತೆ ಗಾಡಿಯನ್ನು ನೆಟ್ಟಗೆ ಸರಸ ಮಹಾಲಿಗೆ ಓಡಿಸಿಕೊಂಡು ಬಂದ. ಈ ಹೊತ್ತು ಲಕ್ಷ್ಮಿಗೆ ಸ್ವಾರಸ್ಯವಾದೊಂದು ಮಾತು ಹೇಳಬೇಕಾಗಿತ್ತು. ಆದುದರಿಂದಲೇ ವಿಜಯಳ ಅಂತಃಕರಣ ಅಷ್ಟೊಂದು ಆತಂಕಕ್ಕೀಡಾಯಿತು. ಲಕ್ಷ್ಮಿಯ ದಾರಿಕಾಯುತ್ತ ಬೀದಿಯ ವರಾಂಡದಲ್ಲಿ ನಿಂತಿದ್ದ ವಿಜಯ, ಲಕ್ಷ್ಮಿಯನ್ನು ಕಂಡೊಡನೆಯೇ ಓಡಿ ಬಂದು ಆವಳ ಕೈ ಹಿಡಿದು ಕರೆತರುತ್ತಾ "ಲಕ್ಷ್ಮೀ, ಬಾರೇ ನಿನಗೊಂದು ತಮಾಷೆ ಸಂಗತಿ ಹೇಳುತ್ತೇನೆ. ಯಾಕೆ ಈ ಹೊತ್ತು ಇಷ್ಟು ತಡ? ನನಗಂತೂ ಆಗಿಲಿಂದ ಕಾದು ನಿಂತು ಕಾಲು ನೋಯುತ್ತೆ? ಎಂದಂದಳು.

"ಎಂದಿನಂತೆ ಗಾಡಿ ಬಂದಕೂಡಲೇ ಹತ್ತಿ ಬಂದುಬಿಟ್ಟೆನಲ್ಲಾ. ಅದೇನೇ ಅದು ಆ ಸಂಗತಿ? ಬೇಗ ಹೇಳಮ್ಮಾ" ಎಂದಳು ಲಕ್ಷ್ಮಿ.

"ಒಳಗೆ ಬಾ, ಅಮ್ಮನೇ ಹೇಳುತ್ತಾಳೆ" ಎಂದು ಅಮ್ಮನು ಇದ್ದಲ್ಲಿಗೆ ಲಕ್ಷ್ಮಿಯನ್ನು ಕರೆತಂದಳು.

ಸರಸ್ವತಮ್ಮನು ಹಿತ್ತಲ ವರಾಂಡದಲ್ಲಿ ಕುಳಿತು ಹೂ ಕಟ್ಟುತ್ತ, ಅಡಿಗೆಯವನಿಗೆ ಏನೋ ಕೆಲಸ ಹೇಳುತ್ತಿದ್ದಳು. ಲಕ್ಷ್ಮಿಯನ್ನು ಕಂಡೊಡನೆ "ಬಾಮ್ಮಾ ಲಕ್ಷ್ಮೀ" ಎಂದು ಬರಮಾಡಿಕೊಂಡಳು. ಲಕ್ಷ್ಮಿಯೂ ವಿಜಯಳೂ ಚಾಪೆಯ ಮೇಲೆ ಕುಳಿತು ಹೂ ಕಟ್ಟಲು ಪ್ರಾರಂಭಿಸಿದರು. ಆಗ ವಿಜಯ "ಅಮ್ಮಾ, ಆ ಮಾತು ನೆನೆಪಿದೆಯಾ? ಈ ಹೊತ್ತು ಲಕ್ಷ್ಮಿ ಬಂದಕೂಡಲೇ ಕೇಳುತ್ತೇನೆ ಎಂದೆಯಲ್ಲಾ?" ಎಂದು ಜ್ಞಾಪಕಪಡಿಸಿದಳು. ಆ ಕೂಡಲೇ ಸರಸ್ವತಮ್ಮನು ನಸುನಗುತ್ತ "ಆ ವಿಷಯವೇ? ಸರಿ. ಲಕ್ಷ್ಮೀ! ನೀನು ನನಗೊಂದು ಸಣ್ಣ ಒತ್ತಾಸೆ

ಮಾಡಬೇಕಾಗಿದೆ. ನಮ್ಮ ವಿಜಯಳಿಗೆ ಇನ್ನೂ ಹದಿನೈದು ದಿನಗಳಲ್ಲಿ ಹುಟ್ಟಿದ ಹಬ್ಬ ಬರುತ್ತದೆ. ಒಂದೊಂದು ವರ್ಷವೂ ಆ ದಿನವನ್ನು ವಿಶೇಷ ವಿಜೃಂಭಣೆಯಿಂದ ಕೊಂಡಾಡುವುದು ಅವರ ತಂದೆಯ ವಾಡಿಕೆ. ಅಷ್ಟು ಮಾತ್ರವಲ್ಲದೆ ಈ ಸಾರಿ ಮಗು ಸಖತ್ ಖಾಯಿಲೆಯಿಂದ ಮಲಗಿ ದೇವರ ಕೃಪೆಯಿಂದ ಗುಣವಾಗಿ ಓಡಾಡುತ್ತಿರುವಳು. ಆದುದರಿಂದ ಈ ಸಲದ ಹುಟ್ಟಿದ ಹಬ್ಬವನ್ನು ಅವಳ ಇಷ್ಟದಂತೆ ಆಚರಿಸಬೇಕೆಂದಿರುವೆವು. ಆ ಹೊತ್ತು ಸುಪ್ರಸಿದ್ಧ ವಿದ್ವಾಂಸರೊಬ್ಬರ ಹಾಡುಗಾರಿಕೆಯನ್ನೂ ಏರ್ಪಡಿಸುವುದು ವಾಡಿಕೆ. ಕಳೆದ ಸಲ ಮೈಸೂರಿನ ಪ್ರಖ್ಯಾತ ಫಿಟೀಲ್ ವಿದ್ವಾಂಸರೊಬ್ಬರನ್ನು ಕರೆಸಿದ್ದೆವು. ವಿಜಯ, ಈ ಸಲ ನಿನ್ನ ಸಂಗೀತವನ್ನೇ ಏರ್ಪಡಿಸಬೇಕೆನ್ನುತ್ತಾಳೆ. ನನ್ನ ಇಷ್ಟವೂ ಅದೇ. ಅವಳ ತಂದೆಯು ಇದಕ್ಕೆ ಒಪ್ಪಿರುವರು " ಎಂದಳು.

ಲಕ್ಷ್ಮೀ ವಿಪರೀತ ನಾಚಿಕೆಯೂ ಸಂಕೋಚವೂ ಬೆರೆತ ಧ್ವನಿಯಲ್ಲಿ " ಏನು ಮಾಮೀ ಇದು! ನಾನೇನು ಅಂತಹ ದೊಡ್ಡ ವಿದ್ವಾಂಸಳೇ? ದೊಡ್ಡ ದೊಡ್ಡ ವಿದ್ವಾಂಸರನ್ನೆಲ್ಲಾ ಕರೆಸಿದೆವೆಂದಿರಿ. ಅವರುಗಳಿಗೂ ನನಗೂ ಆನೆಗೂ ಇರುವೆಗೂ ಇರುವ ವ್ಯತ್ಯಾಸವೇ. ನಾನು ಬೇಡ ಮಾಮೀ, ಬೇರೆ ಯಾರಾದರೂ ಒಳ್ಳೆಯ ವಿದ್ವಾಂಸರನ್ನು ಕರೆಸಿದರೆ ಚೆನ್ನು. ವಿಜಯಳಿಗೇನು ಕೆಲಸ? ಈ ಹೊತ್ತು ನನ್ನನ್ನು ಹಾಡಲು ಹೇಳುವಳು. ನಾಳೆ ತಿಂಗಳ ಮಗುವನ್ನೂ ಕೂಡ ಹಾಡಲು ಹೇಳುವಳು...." ಎಂದಳು.

ಸರಸ್ವತಮ್ಮ " ಹಾಗೆ ಹೇಳಬೇಡ ಮಗೂ. ಚಿಕ್ಕ ಹುಡಿಗಿಯ ಲಕ್ಷಣವಾದ ಇಚ್ಛೆಯನ್ನು ಹಳಿಯಬೇಡ. ನಮ್ಮ ಮಾತಿಗೆ ನೀನಿಷ್ಟು ಬೆಲೆ ಕೊಡು. ನಾಳೆ ನಿಮ್ಮಮ್ಮನ ಇಷ್ಟವನ್ನೂ ಕೇಳಿಬಾ. ನಿನ್ನ ಹಾಡಿಗೇನಂತೆ? ಈ ವರ್ಷ ಕ್ರಿಸ್‌ಮಸ್ ಸಮಯದಲ್ಲಿ ಮದರಾಸಿನಲ್ಲಿ ಜರುಗಲಿರುವ ಸಂಗೀತ ಸಮ್ಮೇಳನದಲ್ಲಿ ಸಹ ನಿನ್ನ ಸಂಗೀತವನ್ನು ಏರ್ಪಡಿಸಬೇಕೆಂದಿರುವರು ನಿಮ್ಮ ಮಾಮಾ!" ಎಂದಳು.

" ಸುಮ್ಮಸುಮ್ಮನಾದರೂ ನನ್ನನ್ನು ಹೊಗಳುತ್ತೀರಿ ನೀವು, ಹೋಗಿ,

ಮಾಮಿ" ಎಂದು ನಾಚುತ್ತಾ ಅಂದು, ವಿಜಯಳನ್ನು ಕರೆದುಕೊಂಡು ತೋಟಕ್ಕೆ ಹೊರಟು ಹೋದಳು ಲಕ್ಷ್ಮಿ.

೭

ಆ ಹೊತ್ತು ಸರಸಮಹಾಲ್ ದೇವೇಂದ್ರ ಭವನದಂತೆ ಬೆಳಗಿತು. ಬಂಗಲೆಯ ಸುತ್ತಲೂ ಮಕರತೋರಣಗಳೂ ಬಣ್ಣಬಣ್ಣದ ಬಾವುಟಗಳೂ, ವಿದ್ಯುದ್ದೀಪಗಳೂ ಅಲಂಕಾರಮಯವಾಗಿ ಬೆಳಗುತಿದ್ದವು. ಮಧ್ಯಾಹ್ನ ಪುರೋಹಿತರುಗಳು ಬಂದು ಆಯುಷ್ಯಹೋಮ ಮಾಡಿದರು. ಬಳಿಕ ಔತಣದೂಟ ಮಾಡಿಕೊಂಡು,ತಾಂಬೂಲ ಪಡೆದು ಹೊರಟು ಹೋದರು. ಸಂಜೆ ಬ್ಯಾರಿಸ್ಟರದಂಪತಿಗಳು ತಮ್ಮ ಇಷ್ಟಮಿತ್ರ ಬಂಧುಗಳನ್ನು ಆಹ್ವಾನಿಸಿ ಟೀ ಪಾರ್ಟಿಯೊಂದನ್ನು ಏರ್ಪಡಿಸಿದ್ದರು.

ಟೀಪಾರ್ಟಿ ಮುಗಿದನಂತರ ಆಹ್ವಾನಿತರೆಲ್ಲರೂ ಸಂಗೀತ ಕಛೇರಿ ಜರುಗಲಿರುವ ಅಲಂಕಾರಮಯವಾದ ಮಂಟಪಕ್ಕೆ ಬಂದು ಸಾಲುಸಾಲಾಗಿ ಹಾಕಿದ್ದ ಕುರ್ಚಿಗಳನ್ನು ಅಲಂಕರಿಸಿದರು. ಎಲ್ಲರೂ ಆ ಹೊತ್ತು ಕಛೇರಿ ಮಾಡಲಿರುವ ವಿದ್ವಾಂಸರು ಯಾರೆಂದು ತಿಳಿಯಲು ತವಕದಿಂದ ಅವರನ್ನು ಇದಿರು ನೋಡುತ್ತ ಕುಳಿತಿದ್ದರು. ಆಗ, ಅದೇ ತಾನೇ ಅರಳಿದ ಕಮಲಪುಷ್ಪಕ್ಕೆ ಹೋಲುವ ಮುಖದ ಹುಡುಗಿಯೋರ್ವಳು ರಂಗಸ್ಥಳದ ಮೇಲೇರಿ ನಿಂತು ಸಭಿಕರಿಗೆ ಕೈ ಜೋಡಿಸಿ ವಂದಿಸಿದಳು. ಸಭಿಕರೆಲ್ಲರೂ ಭ್ರಮಿಸಿದರು. ಆ ಕೂಡಲೇ ಒಬ್ಬರಿಗೊಬ್ಬರು ಪಿಸಪಿಸನೆ ಮಾತೆಬ್ಬಿಸಿದರು. "ಈ ಹುಡುಗಿಯ ಸಂಗೀತವನ್ನು ಕೇಳುವುದಕ್ಕಾಗಿಯೇ ನಮ್ಮನ್ನು ಪ್ರಮಾದವಾಗಿ ಕರೆದರು! ಬಲು ಚೆನ್ನ!! ಸರಿಯಾಗಿ ಮಾತನಾಡಲು ಸಹ ಬಾರದ ಮಗುವನ್ನು ರಂಗಸ್ಥಳದ ಮೇಲೆ ಕುಳ್ಳಿರಿಸಿ ಹಾಡಲು ಹೇಳಿದರೆ ಅದೇನು ಹಾಡಬಲ್ಲದು? ಬಹಳ ಚೆನ್ನಾಗಿದೆ ಕೆಲಸ" ಎಂದು ಟೀಕಿಸಿದರು ಕೆಲವರು. "ಇನ್ನು ಮನೆಗೆ ಹೊರಡೋಣ ಬಾ" ಎಂದು ಎದ್ದುಬಿಟ್ಟರು, ಕೆಲವರು. ಮತ್ತೊಬ್ಬರು, "ಬಂದುದು ಬಂದಾಯಿತು. ಆ ಹುಡುಗಿ ಹೇಗೆ ಹಾಡುತ್ತಾಳೆಂದು ಕೊಂಚ ಕೇಳಿ, ಹೋದರಾಯಿತು" ಎಂದರು.

" ಉಸ್, ಹೀಗೆ ಲೊಟಪಟವೆಂದು ಮಾತನಾಡಿದರೆ ಹೇಗೆ ಸಂಗೀತ ಕೇಳುವುದು ? " ಎಂದು ಮತ್ತೊಬ್ಬ ಸಂಗೀತ ಪ್ರಿಯರು ಬೇಜಾರು ಪಟ್ಟು ಕೊಂಡರು. ಈ ನಡುವೆ ಲಕ್ಷ್ಮಿ ಪಕ್ಕವಾದ್ಯಗಳ ಜೊತೆಯಲ್ಲಿ ಶಂಕರಾಭರಣ ರಾಗವನ್ನು ಆಲಾಪನೆ ಮಾಡಲು ತೊಡಗಿದಳು. ತಕ್ಷಣ ಚಪ್ಪರದ ಆದ್ಯಂತ ನಿಶ್ಶಬ್ದ ಆವರಿಸಿತು. ಮಂತ್ರಕ್ಕೆ ಕಟ್ಟುಬಿದ್ದವರಂತೆ ಸಭಿಕರೆಲ್ಲರೂ ಆ ಬಾಲೆಯ ಅದ್ಭುತಸಂಗೀತದಲ್ಲಿ ತಲ್ಲೀನರಾಗಿ ಶಿಲಾ ಪ್ರತಿಮೆಗಳಂತೆ ಕದಲದೆ ಕುಳಿತಿದ್ದರು ಆಲಾಪನೆ ಮುಗಿದಕೂಡಲೇ ಕಿವುಡಾಗುವಂತೆ ಒಂದೇ ಕರ ಘೋಷ. ಸಭಿಕರೆಲ್ಲರೂ ಆ ಹುಡುಗಿಯ ಸಂಗೀತಜ್ಞಾನವನ್ನೂ ಅದ್ಭುತ ಶಾರೀರವನ್ನೂ ಹೊಗಳಿದರು. ವರ್ಣಗಳೂ ಕೀರ್ತನೆಗಳೂ ಮುಗಿಯಲು " ಪುರಂದರದಾಸರ ಕೀರ್ತನೆಗಳನ್ನು ಹಾಡಬೇಕೆಂದೂ, ಭಾರತಿಯಾರರ ಹಾಡುಗಳನ್ನು ಹಾಡಬೇಕೆಂದಲೂ, ' ಚಾವಡಿ ಚಿಂದು ' ಹಾಡಬೇಕೆಂದೂ ಆ ಬಳಿಕ ಹಿಂದೂಸ್ಥಾನಿ ಸಂಗೀತ, ಚುಟಕ, ದೇಶೀಯಗೀತ.... ಈ ರೀತಿಯಾಗಿ ಮೇಲಿಂದ ಮೇಲೆ ಹಾಡಬೇಕೆಂದು ಸಭಿಕರಿಂದ ಕೋರಿಕೆಗಳು ಬರುತ್ತಲೇ ಇದ್ದುವು.

ರಾತ್ರಿ ಘಂಟೆ ಏಳಾಯಿತು, ಎಂಟೂ ಆಯಿತು. ಸಭಿಕರು ಕದಲುವ ಸೂಚನೆಯೇ ಇಲ್ಲ. ಹುಡುಗಿಗೆ ಬಹಳ ಆಯಾಸವಾಗಿರಬೇಕೆಂದು ರಾಮಚಂದ್ರ ಐಯ್ಯರು ಅಂದರು. ಸರಸ್ವತಮ್ಮನೂ ಆ ಸೂಚನೆಯನ್ನು ಅನುಮೋದಿಸಲು, ಐಯ್ಯರವರು ಎದ್ದು ನಿಂತು ಹುಡುಗಿಯ ವಿದ್ವತ್ತನ್ನೂ ಸಂಗೀತ ಜ್ಞಾನವನ್ನೂ ಕುರಿತು ಪುಟ್ಟದೊಂದು ಭಾಷಣ ಮಾಡಿದರು. ಕರತಾಡನದ ನಡುವೆ ಸರಸ್ವತಮ್ಮನು ಲಕ್ಷ್ಮಿಯ ಹಣೆಗೆ ಕುಂಕುಮದ ಬೊಟ್ಟಿಟ್ಟು ರೇಷ್ಮೆಸಿರೇ ಕುಪ್ಪುಸ ಫಲ ತಾಂಬೂಲಭರಿತ ತಟ್ಟೆಯೊಂದನ್ನು ಆದರದಿಂದ ಅವಳ ಕೈಗಿತ್ತಳು. ಅದನ್ನು ವಿನಯವಾಗಿ ಲಕ್ಷ್ಮಿಯು ಎರಡೂ ಕೈಗಳಿಂದ ತೆಗೆದುಕೊಂಡು, ಸರಸ್ವತಮ್ಮನನ್ನೂ ಸಭಿಕರನ್ನೂ ವಂದಿಸಿದಳು. ವಿಜಯ ಗುಲಾಬಿ ಹೂವಿನ ಹಾರವೊಂದನ್ನು ತಂದು ಲಕ್ಷ್ಮಿಯ ಕೊರಳಲ್ಲಿ ಹಾಕಲು ಸಭಿಕರು ಮತ್ತೆ ಕರತಾಡನ ಮಾಡಿದರು. ಬಳಿಕ ಎಲ್ಲರೂ ತಾಂಬೂಲ ಪಡೆದು ತಮ್ಮ ತಮ್ಮ ಮನೆಗಳಿಗೆ ಹೊರಟರು.

ರಾತ್ರೆ ಎಂಟುಘಂಟೆ ಹೊಡೆದುದಾಯಿತು. ಲಕ್ಷ್ಮಿ ತಾನು ಬೇಗನೆ ಹೋಗಬೇಕೆಂದು ಸರಸ್ವತಮ್ಮನನ್ನೂ ವಿಜಯಳನ್ನೂ ಅನುಮತಿ ಕೇಳಿದಳು.

ಆದರೆ, ಮನೆಯ ಗಾಡಿಯು ಗೆಳೆಯರೊಬ್ಬರನ್ನು ಅವರ ಮನೆಗೆ ಕರೆದೊಯ್ದುದರಿಂದ, ಅದು ಹಿಂತಿರುಗಿ ಬಂದಕೂಡಲೇ ಲಕ್ಷ್ಮಿಯನ್ನು ಮನೆಗೆ ಕಳುಹಿಸಿ ಕೊಡುವುದಾಗಿ ಸರಸ್ವತಮ್ಮ ನುಡಿದಳು. ಇಷ್ಟೊಂದು ಹೊತ್ತಾಗಿಯೂ ತಾನು ಮನೆಗೆ ಬಾರದೇಇರುವುದನ್ನು ಕಂಡರೆ ತನ್ನ ತಾಯಿ ಚಿಂತೆಗೀಡಾಗಿ ಮನೆಯ ಸೇವಕಿ ಅಳಗಾಯಿಯನ್ನು ಕಳುಹಿಸಿರುವುದರಿಂದ ತಾನು ಅವಳೊಡನೆ ಮನೆಗೆ ಕಾಲುನಡಿಗೆಯಲ್ಲೇ ಹೋಗುವುದಾಗಿ ಲಕ್ಷ್ಮಿ ಅಂದಳು. ಬಗೆಹರಿಯದೆ ಸರಸ್ವತಮ್ಮ ಅವಳನ್ನು ಆ ಹೆಣ್ಣಾಳಿನ ಜೊತೆಯಲ್ಲೇ ಮನೆಗೆ ಕಳುಹಿಸಿಕೊಟ್ಟಳು.

ಸರಸಮಹಲಿಗೂ ಲಕ್ಷ್ಮಿಯ ಮನೆಗೂ ಸುಮಾರು ಒಂದೂವರೆ ಮೈಲು ದೂರ. ಶಿವಸ್ವಾಮಿಪುರ ವಿಸ್ತಾರದಲ್ಲಿ ಇರುವ ಸರಸ ಮಹಾಲಿನಿಂದ ನಗರದಲ್ಲಿರುವ ಲಕ್ಷ್ಮಿಯ ಮನೆಗೆ ರಾಜಬೀದಿಯ ಮಾರ್ಗವಾಗಿ ಹೋಗುವುದಕ್ಕಿಂತ ಅಡ್ಡದಾರಿಯಲ್ಲಿ ಹೋದರೆ ಬೇಗ ಮನೆಯನ್ನು ತಲುಪಬಹುದೆಂದು ಆ ಹೆಣ್ಣಾಳು ಅಳಗಾಯಿ ಹೇಳಿದಳು. ಆದುದರಿಂದ ಅವರಿಬ್ಬರೂ ಗಲ್ಲಿಗಳ ಮಾರ್ಗವಾಗಿ ಹಾದು ಹೋದರು. ಆದರೆ ಲಕ್ಷ್ಮಿ ಅದರ ಮೊದಲು ಈ ಹೊಸದಾರಿಯಲ್ಲಿ ಎಂದೂ ಹೋಗಿರಲಿಲ್ಲ. ಗಲ್ಲಿಗಳಲ್ಲಿ ದೀಪ ಇರುವುದಿಲ್ಲವಾದುದರಿಂದ ಒಂದೇ ಕಗ್ಗತ್ತಲೆಯಾಗಿತ್ತು. ಕತ್ತಲೆಂದರೆ ಲಕ್ಷ್ಮಿಗೆ ಬಹಳ ಹೆದರಿಕೆ. ಅಳಗಾಯಿ ದಾರಿಯುದ್ದಕ್ಕೂ ಅವಳಿಗೆ ಧೈರ್ಯ ಹೇಳುತ್ತ ಹೋದಳು. ಆ ಸಮಯ, ಕೇಡಿಯೊಬ್ಬನು ಹಿಂದಿನಿಂದ ಹಠಾತ್ತನೆ ಬಂದು ಲಕ್ಷ್ಮಿಯ ದಾರಿ ತಡೆದು, ಅವಳ ಕೈಗಳಲ್ಲಿ ಇದ್ದ ಹೊಸ ಸೀರೆಯನ್ನು ಕಿತ್ತುಕೊಳ್ಳಲು ಯತ್ನಿಸಿದನು. ಇಬ್ಬರೂ ಭಯಭೀತರಾಗಿ ಕಿಟ್ಟನೆ ಕಿರಿಚಿಕೊಂಡರು. ಲಕ್ಷ್ಮಿಯ ಮೈ ಗಡಗಡನೆ ನಡುಗತೊಡಗಿತು. ಅದೇ ಸಮಯ ಇದಿರು ಪಾರ್ಶ್ವದಿಂದ ಬರುತ್ತಿದ್ದ ಯುವಕನೋರ್ವನು ಇವರುಗಳ ಕಿರಿಚಾಟ ಕೇಳಿ ಒಂದೇಸವನೆ ಧಾವಿಸಿ ಬಂದನು. ಅವನನ್ನು ಕಂಡೊಡನೆಯೇ ಪುಂಡನು ಅಲ್ಲಿಂದ ಓಟ ಕಿತ್ತಿದ. ಕ್ಷಣಕಾಲದಲ್ಲಿ

ಏರ್ಪಟ್ಟಂತಹ ಈ ಭಯಂಕರ ಸಂಭವವನ್ನು ಕಂಡು ಲಕ್ಷ್ಮಿ ಭಯದಿಂದ ಉಡುಗಿಹೋದಳು. ಆ ಯುವಕನಿಗೆ ಧನ್ಯವಾದವನ್ನು ಅರ್ಪಿಸಿದಳು.

ಅಳಗಾಯಿ ತನ್ನ ಸೆರಗತುದಿಯಿಂದ ಹಣೆಯಲ್ಲಿದ್ದ ಬೆವರಿನ ಹನಿಗಳನ್ನು ಒರೆಸಿಕೊಳ್ಳುತ್ತ, "ಅದೇನ್ ಸ್ವಾಮಿ, ಈ ಕಳ್ಳನೆಲ್ಲಿಂದ ವೊಳೆತವ್ನೆ! ನೀನು ಬಾರ್ದೇ ಹೋಗಿದ್ರೇ ನಾವು ಹೆಣ್ಮಕ್ಳು ಏನ್ಮಾಡೋಕಾಗ್ತೆ? ದೇವ್ರು ನಿಮ್ನು ಕಳಿಸವ್ನೆ! ಸ್ವಾಮಿ, ನಿಮ್ಗೆ ಸಾವಿರ ನಮಸ್ಕಾರಗ್ಳು. ಮಕ್ಳು ಮರಿಮಕ್ಕೊಂದ್ಗೆ ಸಾವಿರ ಕಾಲ ಮಾರಾಯನಾಗಿ ಬಾಳಪ್ಪಾ ನನ್ ಒಡ್ಯಾ" ಎಂದು ಹೇಳಿ ಆ ಯುವಕನಿಗೆ ಕೈ ಜೋಡಿಸಿ ನಮಸ್ಕರಿಸಿದಳು. "ಸಾಮೀ ನಮ್ ಚಿಕ್ಕಮ್ಮಾವ್ರು ಬಹಳ ಹೆದರ್ಬಿಟ್ಟವ್ರೆ. ಒಸೀದೂರ ಮನೇತಾಕೆ ಬಂದ್ಬೋದ್ರೆ ವಾಸಿ. ಉಪಕಾರವಾಗತ್ತೈತೆ" ಎಂದು ಹಲ್ಲು ತೋರಿಸುತ್ತ ಅಂಗಲಾಚಿದಳು.

ಯುವಕ ನಸುನಗುತ್ತ, "ಅಮ್ಮಾವರನ್ನು ಹೇಳುತ್ತೀಯಲ್ಲಾ! ನೀನು ಯಾಕೆ ಅಷ್ಟು ಗಟ್ಟಿಯಾಗಿ ಕಿರಿಚಿಕೊಂಡೆ? ಅಮ್ಮಾವರನ್ನು ಆಪತ್ತಿನಿಂದ ಪಾರುಮಾಡುವುದು ಬಿಟ್ಟು, ನೀನೂ ಜೊತೆಗೆ ಸೇರಿಕೊಂಡು ಹಾಗೆ ಕಿರಿಚುವುದೆಂದರೇನು? ಒಹಳ ಗಟ್ಟಿಗಳು" ಎಂದನು.

ಲಕ್ಷ್ಮಿ "ಇನ್ನುಮೇಲೆ ನಿನ್ನನ್ನು ಜೊತೆಗೆ ಕರೆದುಕೊಂಡು ನಾನೆಲ್ಲೂ ಹೋಗೋಲ್ಲ, ಸಾಕಮ್ಮಾ ನಿನ್ನೊಡನೆ ಬಂದ ಸುಖ" ಎಂದಂದಳು. ಅವರುಗಳು ಆ ವೇಳೆಗೆ ಆ ಗಲ್ಲಿಯನ್ನು ದಾಟಿ ದೀಪದ ಬೆಳಕಿರುವ ರಾಜಬೀದಿಯನ್ನು ಸೇರಿದರು ಯುವಕನು, ಆ ಹುಡುಗಿಯ ಮಧುರಧ್ವನಿಯನ್ನು ಲಾಲಿಸಿ ಈಗಾಗಲೇ ಮನಸೋತಿದ್ದನು. ದೀಪದ ಬೆಳಕಿನಲ್ಲಿ ಅವಳ ಸುಂದರಾಕೃತಿಯನ್ನು ಕಂಡು ಬೆರಗಾದನು.

ಅಷ್ಟರೊಳಗಾಗಿ ಲಕ್ಷ್ಮಿಯ ಮನೆ ಸಮೀಪಿಸಿತು. ಲಕ್ಷ್ಮಿಯ ಬರುವಿಕೆಯನ್ನು ನಿರೀಕ್ಷಿಸುತ್ತ ಬೀದಿಯ ಬಾಗಿಲಲ್ಲೇ ನಿಂತಿದ್ದ ಸೀತಮ್ಮನು, "ಲಕ್ಷ್ಮಿ ಏಕೆ ಇಷ್ಟು ಹೊತ್ತು?" ಎಂದು ರೇಗಿದಳು. ಆದರೆ ಲಕ್ಷ್ಮೀ ಅಳಗಾಯಿಯರೊಡನೆ ಯುವಕನೊಬ್ಬನೂ ಬಂದಿರುವುದನ್ನು ಕಂಡು, ಆಶ್ಚರ್ಯಗೊಂಡು ಅಷ್ಟಕ್ಕೇ ಮಾತು ನಿಲ್ಲಿಸಿದಳು.

ಆಕೆ ಆ ಹುಡುಗಿಯ ತಾಯಿಯೆಂದು ಮುಖಹೋಲಿಕೆಯಿಂದಲೇ

ಅರಿತನು ಆ ತರುಣ. "ಅಮ್ಮಾ, ಹುಡುಗಿಯನ್ನು ರಾತ್ರಿಯ ವೇಳೆಯಲ್ಲಿ ಹೆಣ್ಣಾಳಿನ ಜೊತೆಯಲ್ಲಿ ಒಂಟಿಯಾಗಿ ಕಳುಹಿಸಬೇಡಿ. ಅವಳಾದರೋ ನಿಮ್ಮ ಮಗಳಿಗಿಂತ ಹೆಚ್ಚು ಅಂಜುಬುರುಕಿ" ಎಂದನು ಆ ಯುವಕ. ಅಷ್ಟರೊಳಗೆ ಅಳಗಾಯಿ ನಡುವೆ ಮಾತೆತ್ತಿ, ತನ್ನ ಒಡತಿಯ ಹತ್ತಿರ ತಾವುಗಳು ಬರುವ ದಾರಿಯಲ್ಲಿ ಏರ್ಪಟ್ಟಂತಹ ಕೆಟ್ಟ ಸಂಭವವನ್ನು ವಿವರಿಸಿ, ಆ ಯುವಕನು 'ಸಮಯ ಸಂಜೀವಿ'ಯಂತೆ ಬಂದು ಒದಗಿ, ತಮ್ಮಿಬ್ಬರನ್ನೂ ಕಳ್ಳನ ಕೈಯಿಂದ ತಪ್ಪಿಸಿ ಕಾಪಾಡಿದುದನ್ನು ಸಾಂಗವಾಗಿ ಹೇಳಿ, ಆ ಯುವಕನನ್ನು ಬಾಯಿತುಂಬ ಹೊಗಳಿದಳು.

ತಕ್ಷಣ ಸೀತಮ್ಮನ ಮುಖ ಅರಳಿತು. "ದೇವರೇ ನಿಮ್ಮನ್ನು ಆ ಸಂದರ್ಭದಲ್ಲಿ ಕಳುಹಿಸಿಕೊಟ್ಟು ನನ್ನ ಮಗುವನ್ನು ಕಾಪಾಡಿದರು. ನಾನೂ ನನ್ನ ಮಗಳೂ ನಿಮ್ಮ ಮಹದುಪಕಾರವನ್ನು ಎಂದೆಂದಿಗೂ ಮರೆಯಲೊಲ್ಲೆವು. ಮನೆಯೊಳಗೆ ಬಂದು ಏನಾದರೂ ಕೊಂಚ ತೆಗೆದು ಕೊಂಡು ಹೋಗಬಹುದಲ್ಲಾ. ಆಗಲೇ ನನ್ನ ಮನಸ್ಸಿಗೆ ಸಂತೋಷ" ಎಂದು ಉಪಚಾರದ ನುಡಿಗಳನ್ನು ಅಂದಳು.

ಯುವಕ ಬಹಳ ಸಂಕೋಚದಿಂದ, "ಇಲ್ಲ, ಕ್ಷಮಿಸಬೇಕು ಹೊತ್ತಾಯಿತು. ನಾನು ಬರಲೇ?" ಎಂದಂದು, ಆ ಹುಡುಗಿಯನ್ನು ಮತ್ತೊಂದು ಸಲ ಕಂಡು ಅನುಮತಿ ಪಡೆದನು. ಆಗ ಅವರಿಬ್ಬರ ಕಣ್ಣುಗಳೂ ಕೂಡಿಕೊಂಡವು. ಅವರೀರ್ವರ ದೇಹದಲ್ಲಿಯೂ ವಿದ್ಯುತ್ಸಂಚಾರ ವಾದಂತಾಯಿತು. ಸಹಿಸಲಸಾಧ್ಯವಾದಂತಹ ವಿಚಿತ್ರ ಅನುಭವವಾಯಿತು. ಯುವಕನೂ ಅಲ್ಲಿಂದ ನಿಧಾನವಾಗಿ ಸರಿದನು. ಲಕ್ಷ್ಮಿ, ತನ್ನ ತಾಯ ಕೈಯಲ್ಲಿ ಸರಸ್ವತಮ್ಮನು ತನಗೆ ಬಹುಮಾನವಾಗಿ ಇತ್ತ ಸಿಲ್ಕ್ ಸೀರೆ ಯನ್ನೂ, ಕುಪ್ಪುಸದ ಕಣವನ್ನೂ ಕೊಟ್ಟು, ಉಡಿಗೆ ಬದಲಾಯಿಸಲು ಕೊಠಡಿಯೊಳಗೆ ಹೊರಟುಹೋದಳು. ಅಳಗಾಯಿ ಸರಸ ಮಹಾಲಿನಿಂದ ಹೊತ್ತು ತಂದ ಹಣ್ಣು ಹಂಪಲು, ಪುಷ್ಪಹಾರ, ತಾಂಬೂಲಾದಿಗಳು ತುಂಬಿದ ಬುಟ್ಟಿಯನ್ನು ಸೀತಮ್ಮನ ವಶಕ್ಕೆ ಒಪ್ಪಿಸಿ ತನ್ನ ಮನೆಗೆ ಹೊರಟು ಹೋದಳು.

ತಾಯಿ, ಮಗಳಿಬ್ಬರೂ ಊಟ ಮಾಡಿದ ಬಳಿಕ, ಬಾಕೀ ಚಿಲ್ಲರೆ

ಕೆಲಸಗಳನ್ನು ಮುಗಿಸಿಕೊಂಡು ನಡುಮನೆಯಲ್ಲಿ ಬಂದು ಸ್ವಲ್ಪಹೊತ್ತು ಕುಳಿತು ಮಾತನಾಡುತ್ತಿದ್ದರು. ಬಳಿಕ ಮಲಗಲು ಹೋದರು.

ಸೀತಮ್ಮನಂತೂ ದಿನವೆಲ್ಲ ವಿರಾಮವಿಲ್ಲದೆ ದುಡಿದುದರ ಫಲವಾಗಿ ಆಯಾಸದಿಂದ ಚೆನ್ನಾಗಿ ನಿದ್ರೆಹೋದಳು. ಆ ಹೊತ್ತು ಬೆಳಕು ಹರಿಯುತ್ತಲೇ ಲಕ್ಷ್ಮಿ ಸರಸಮಹಾಲಿಗೆ ಹೊರಟು ಹೋಗಿದ್ದುದರಿಂದ ಹಗಲು ಪೂರ್ತಿ ಎಲ್ಲ ಕೆಲಸವೂ ಸೀತಮ್ಮನ ಪಾಲಿಗೇ ಬಿತ್ತು. ಆದುದರಿಂದ ಸೀತಮ್ಮ ಬಹಳ ಬಳಲಿಹೋಗಿದ್ದಳು. ಆದರೆ, ಲಕ್ಷ್ಮಿಯಾದರೋ ತನ್ನನ್ನು ಅಪಾಯದಿಂದ ಪಾರುಮಾಡಿದ ಆ ಸುಂದರ ತರುಣನ ನೆನೆಪಿನಲ್ಲೇ, ಚಿಂತಿಸುತ್ತ ಬಹಳ ಹೊತ್ತು ನಿದ್ರೆಬಾರದೆ ಹಾಸಿಗೆಯಲ್ಲಿ ಹೊರಳಾಡಿದಳು. ಆ ಮನ್ಮಥ ಸ್ವರೂಪನನ್ನು ಮತ್ತೆ ಕಾಣುವ ಭಾಗ್ಯ ತನಗೆ ಲಭಿಸುವುದೇ ಎಂಬ ಚಿಂತೆಯಲ್ಲಿ ತೊಳಲಿದಳು. ಇಷ್ಟರವರೆಗೆ ಪ್ರೇಮವೆಂದರೇನು ಪರಿಣಯವೆಂದರೇನು ಎಂದರಿಯದ ಆ ಬಾಲೆಗೆ, ಈ ಹೊತ್ತು ತನ್ನರಿವಿಲ್ಲದೆಯೇ ಒಂದು ರೀತಿಯ ವ್ಯಾಕುಲವೇರ್ಪಟ್ಟಿತು. ಅವಳ ಮನದೊಳಗೆ ಒಂದರ ಹಿಂದೊಂದರಂತೆ ಯೋಚನಾತರಂಗಗಳು ಉದ್ಭವಿಸಿ ಅವಳ ಉಸುರು ಕಟ್ಟಿಸಿದವು. ಈ ರೀತಿಯಾಗಿ ಆ ಹೊತ್ತು ರಾತ್ರಿಯೆಲ್ಲ ನಿದ್ರೆಯಿಲ್ಲದೆ ಆ ಯುವಕನ ನೆನೆಪಿನಲ್ಲೇ ಕಳೆದಳು. ಬೆಳಗಿನ ಜಾವ ನಾಲ್ಕು ಘಂಟೆಯ ಬಳಿಕ, ಕೊಂಚ ನಿದ್ರೆ ಹತ್ತಿತು ಅವಳಿಗೆ.

೮

ರಾತ್ರಿ ಊಟವಾದ ಬಳಿಕ ವಿಜಯ, ಮನೆಯ ಮುಂದಣವರಾಂಡದ ಒಂದು ಕುರ್ಚಿಯಲ್ಲಿ ಬಂದು ಕುಳಿತಳು. ಲಕ್ಷ್ಮಿ ಪ್ರಾರಂಭಿಸಿಕೊಟ್ಟಿದ್ದ 'ಸ್ವೆಟ್ಟರ'ನ್ನು ಹೆಣೆಯುತ್ತಲಿದ್ದಳು. ಮಹಾದೇವನ್‌ರೂ ಅಲ್ಲೇ ವಿಜಯಳ ಸಮೀಪದಲ್ಲಿದ್ದ ಆರಾಮ ಕುರ್ಚಿಯೊಂದರಲ್ಲಿ ಕುಳಿತು ಪತ್ರಿಕೆ ತಿರುವುತ್ತಿದ್ದರು. ಸರಸ್ವತಮ್ಮನೂ ಊಟವಾದ ಬಳಿಕ ಅಡಿಗೆಯ ಮನೆಯ ಚಿಲ್ಲರೆ ಕೆಲಸಗಳನ್ನು ಗಮನಿಸಿಕೊಂಡು ತಾಂಬೂಲದ ತಟ್ಟೆಯ ಸಹಿತ ಮುಂದಿನ ನಡುಮನೆಗೆ ಬಂದು ( Drawing Hall ) ಕುಳಿತಳು. "ಏನೊಂದ್ರೆ ಅಂಬಿಯಿಂದ ಕಾಗದವೇ ಬರಲಿಲ್ಲವಲ್ಲಾ ? ಅವನನ್ನು ಬಿಟ್ಟು

ನಾವೆಲ್ಲ ಹಬ್ಬದೂಟ ಮಾಡಿದುದಾಯಿತು " ಎಂದಳು.

ಅದಕ್ಕೆ ಉತ್ತರವಾಗಿ ಮಹಾದೇವನ್‌ರವರು " ಅವನಿಗೆ ಪರೀಕ್ಷೆ ನಡೆಯುತ್ತಿರುವಾಗ, ಕಾಗದ ಹೇಗೆ ಬರೆಯಬಲ್ಲನು? ಇನ್ನೂ ಒಂದೆರಡೇ ದಿನದಲ್ಲಿ ಪರೀಕ್ಷೆ ಮುಗಿಯಬಹುದು, ಮುಕ್ಕಾಲು ಪಾಲು ನಾಳೆಯೇ ಅವನಿಂದ ಕಾಗದ ಬರಬಹುದು " ಎಂದರು.

" ಏನೋ ಹೋಗಿ, ಈ ಹೊತ್ತು ಅವನಿಲ್ಲದೆ ಹಬ್ಬ ಶೋಭಿಸಲೇ ಇಲ್ಲ. ನನಗಂತೂ ಅವನ ನೆನಪಾಗುತ್ತಿದೆ. "

" ಈಗಲೇ ನೀನಿಷ್ಟು ಚಿಂತೆಗೀಡಾದರೆ ಅವನಿಗೆ ಈ ಪರೀಕ್ಷೆಯಾದರೆ ವಿಲಾಯಿತಿಗೆ ಹೋಗಬೇಕಲ್ಲಾ, ಆಗೇನು ಮಾಡುವೆ? " ಎಂದು ತಿಳಿ ಹಾಸ್ಯದಿಂದ ಅಂದರು.

ಅಷ್ಟರೊಳಗಾಗಿ ವಿಜಯಳು, " ಅಮ್ಮಾ, ಅಮ್ಮಾ! ಅಗೋ ಅಣ್ಣ ಬಂದ. ಅಣ್ಣಾ! ನಿನಗೆ ನೂರು ವಯಸ್ಸು!! ಅಮ್ಮನೂ ಅಪ್ಪನೂ ಇದೇ ತಾನೇ ನಿನ್ನ ವಿಷಯವಾಗಿ ಮಾತನಾಡುತ್ತಿದ್ದರು '' ಎಂದಳು.

ಅದನ್ನು ಕೇಳಿ, ಸರಸ್ವತಮ್ಮ, " ಹೋಗೇ, ಹೋಗು ತುಂಟಿ. ಹಾಗೆ ಅವನು ಬಂದರೂ ಸಹ ಈಗ ಅವನಿಗೆ ರೈಲೆಲ್ಲಿ? ಇದರಿಂದಲೇ ಗೊತ್ತಾಗ ಲಿಲ್ಲವೇನು ನಿನ್ನ ತಮಾಷೆ! " ಎಂದಳು.

ಮಹಾದೇವನ್ ನಸುನಗುತ್ತ, "ಬಾರೋ, ಅಂಬಿ. ಬಾ. ನಿಮ್ಮಮ್ಮ ಆಗಿನಿಂದಲೂ ನಿನ್ನನ್ನೇ ನೆನೆನೆನೆದು ಮರುಗುತ್ತಿದ್ದಾಳೆ. ನೀನೇ ಬಂದು ಅವಳಿಗೆ ಸಮಾಧಾನ ಹೇಳು ಏನು, ತುಂಬ ಬಡವಾಗಿರುವೆಯಲ್ಲಾ? " ಎಂದರು.

ಸರಸ್ವತಮ್ಮ "ಹೌದೌದು, ಅಪ್ಪನೂ ಮಗಳೂ ಸೇರಿಕೊಂಡು ನನ್ನನ್ನು ತಮಾಷೆ ಮಾಡುತ್ತೀರೇನು?" ಎನ್ನುತ್ತಿರುವಾಗಲೇ ಯಾರೋ ಹಿಂದಿನಿಂದ ಬಂದು ಇವಳ ಕಣ್ಣುಗಳನ್ನು ಮುಚ್ಚಲು, ಆಕೈಗಳನ್ನು ಮುಟ್ಟಿನೋಡಿ " ತೆಗಿಯೋ ಅಂಬಿ, ಈಗ ಬಂದವನು ಬೆಳಿಗ್ಗೆಯೇ ಬರ ಬಾರದಿತ್ತೇ? ಮನೆಯೆಲ್ಲ ಎಷ್ಟು ಕಳೆಯಿಂದ ಶೋಭಿಸುತ್ತಿತ್ತು. ಭಕ್ಷ್ಯ ಗಳನ್ನಾದರೂ ತಿನ್ನುವಿಯಂತೆ, ಬಾ! " ಎಂದಳು.

ಅಂಬಿ ತಾಯಿಯ ಹತ್ತಿರ ಬಂದು ಕುಳಿತನು.

ಮಹಾದೇವ ಐಯ್ಯರ್, "ಲೋ ಅಂಬಿ. ನಿನಗೆ ಈಗ ಗಾಡಿಎಲ್ಲೋ? ಮದರಾಸು ಗಾಡಿ ಸಾಯಂಕಾಲವೇ ಬಂದಿರಬೇಕಲ್ಲ? ಒಂದು ಸಾಲು ಬರೆದು ಹಾಕಬಾರದಿತ್ತೇ ಮನೆಯಲ್ಲಿ ಕಾರು, 'ಕೋಚ್' ಎರಡೂ ಇದ್ದೂ ಕೂಡ ನಿನಗೆ ಸಮಯಕ್ಕೆ ಇಲ್ಲದಂತಾಯಿಲ್ಲಾ." ಎಂದು ಹೇಳಿದರು.

"ಅಪ್ಪಾ, ಎರಡು ಗಾಡಿ ಇದ್ದರೂ ಕೂಡಾ ಈ ಹೊತ್ತು ಲಕ್ಷ್ಮಿ ಈ ಕತ್ತಲಲ್ಲಿ ಕಾಲು ನಡಿಗೆಯಲ್ಲಿ ಹೋಗಬೇಕಾಯಿತು. ಕಾರಂತೂ ಕೆಟ್ಟು ಹೋಗಿದೆ." ಎಂದಳು ವಿಜಯ.

"ನಿನ್ನೆಯೇ ಪರೀಕ್ಷೆ ಮುಗಿದು ಹೋಯಿತು, ರಜೆಯನ್ನು ವ್ಯರ್ಥ ವಾಗಿ ಕಳೆಯುವುದೇಕೆಂದು ಕಾಗದ ಹಾಕದೆಯೇ ಕೂಡಲೇ ಹೊರಟು ಬಂದೆ." ಎಂದಂದು, "ಅಮ್ಮಾ, ಈ ಹೊತ್ತು ಏನು ವಿಶೇಷ?" ಎಂದು ಕೇಳಿದನು.

ನಮ್ಮ ವಿಜಯಳಿಗೆ ಹುಟ್ಟಿದ ಹಬ್ಬವಲ್ಲವೇ, ಈ ಹೊತ್ತು? ಅಪ್ಪಾ ವರೂ, ವಿಜಯಳೂ ಇದನ್ನು ಕುರಿತು ಕಳೆದ ವಾರವೇ ನಿನಗೆ ಬರೆ ದಿದ್ದಿರಲ್ಲಾ ?"

"ಇಲ್ಲಮ್ಮ, ನನಗೆ ಆಕಾಗದ ಬರಲೇಇಲ್ಲವಲ್ಲಾ. ಈ ಹೊತ್ತು ಹುಟ್ಟಿದ ಹಬ್ಬವೆಂದು ತಿಳಿದಿದ್ದರೆ ನಿನ್ನೆ ರಾತ್ರೆಯ ಗಾಡಿಯಲ್ಲೇ ಹೊರಟು ಬರುತ್ತಿದ್ದೆನಲ್ಲಾ.ನಾನಂತು ಏಳು ಘಂಟೆಗೇ ಊರು ತಲುಪಿದೆ. ಹಾಗೆಯೇ ಟೌನಿನಲ್ಲಿರುವ ಸ್ನೇಹಿತನ ಮನೆಗೆ ಹೋಗಿ 'ವಾಕ್' ಹೋಗಿ ಬಂದು ಬಿಡೋಣವೆಂದು ಬರುತ್ತಿದ್ದೆ. ದಾರಿಯಲ್ಲೊಂದು ತಕರಾರು" ಎಂದನು.

"ಹಾಸಿಗೆ ಪೆಟ್ಟಿಗೆ ಎಲ್ಲ ಎಲ್ಲೋ ಅಂಬಿ?"

ಅಂಬಿ "ಎಲ್ಲ ಸ್ನೇಹಿತನ ಮನೆಯಲ್ಲಿವೆ. ನಾನು ಕಾಲ್ನಡಿಗೆಯಲ್ಲಿ ಬಂದುದರಿಂದ ಅವನ್ನೆಲ್ಲ ಅಲ್ಲೇ ಇಟ್ಟು ಬಂದೆ. ಸಿದ್ದನನ್ನು ಕಳುಹಿಸಿ ಕರಿಸಿದರಾಯಿತು."

ವಿಜಯ, "ಬರುವದಾರಿಯಲ್ಲಿ ಏನೋ ತಕರಾರು ಎಂದೆಯಲ್ಲಾ ? ಅದೇನು ಹೇಳಣ್ಣಾ."

"ಎಲ್ಲ ಆ ಮೇಲೆ ಹೇಳುತ್ತಾನೆ. ಕೊಂಚ ತಾಳು. ಅವನು ಊಟ ಮಾಡಬೇಡವೇ? ಬಾರೋ, ಅಂಬಿ. ಕೈಕಾಲು ತೊಳೆದುಕೊಂಡು ಊಟಕ್ಕೆ

ಏಳು. ನಾನು ಹೋಗಿ ಎಲೆ ಹಾಕಹೇಳುತ್ತೇನೆ" ಎಂದಂದು ಎದ್ದು ಅಡಿಗೆಯ ಮನೆಯ ಕಡಗೆ ಹೋದಳು ಸರಸ್ವತಮ್ಮ.

ಅಂಬಿಯೂ ಸಹ ಅಂಗಿಯನ್ನು ಕಳಚಿ ಕೈಕಾಲು ತೊಳೆದುಕೊಂಡು ಊಟಕ್ಕೆ ಬಂದು ಕುಳಿತನು. ಅವನ ಸಮೀಪದಲ್ಲಿ ಅವನ ತಾಯಿಯೂ, ತಂಗಿಯೂ ಕುಳಿತು ಸಂಭಾಷಿಸುತ್ತಿದ್ದರು. ಆಗ ಅಂಬಿ, ತಾನು ಟೌನಿನಿಂದ ಮನೆಗೆ ಬರುತ್ತಿರುವಾಗ, ಒಬ್ಬ ಹುಡುಗಿಯನ್ನು ಕಳ್ಳನೊಬ್ಬನು ದಾರಿಗೆ ಅಡ್ಡ ಬಂದು ಅವಳ ಕೈಯಲ್ಲಿರುವ ಸಾಮಾನುಗಳನ್ನು ಅಪಹರಿಸಲು ಯತ್ನಿಸುತ್ತಿದ್ದನೆಂದೂ, ಆ ಹುಡುಗಿಯೂ ಅವಳ ಜೊತೆಯಲ್ಲಿದ್ದ ಸೇವಕಿಯೂ ಕಿರಿಚಿಕೊಳ್ಳಲು, ತಾನು ಅವರಿದ್ದೆಡೆಗೆ ಓಡಿ ಹೋಗಲು, ಕಳ್ಳ ತನ್ನನ್ನು ಕಂಡು ಓಡಿಹೋದುದನ್ನೂ ವಿವರಿಸಿ ಹೇಳಿದನು. ಅವರಿಬ್ಬರನ್ನೂ ಮನೆಯವರೆಗೆ ಕರೆದುಕೊಂಡು ಹೋಗಿ ಬಿಟ್ಟುಬಂದುದರಿಂದಲೇ ತಾನು ಬರಲು ಇಷ್ಟು ಹೊತ್ತಾಯಿತೆಂದೂ ಹೇಳಿದನು. ಇದನ್ನು ಕೇಳಿ ಸರಸ್ವತಮ್ಮನಿಗೂ ವಿಜಯಳಿಗೂ ಆ ಹುಡುಗಿ ಲಕ್ಷ್ಮಿಯೇ ಇರಬೇಕೆಂದು ತೋರಿತು. ತಕ್ಷಣ ಸರಸ್ವತಮ್ಮನು ದುಃಖಿತಳಾಗಿ "ಏನೋ, ಅಂಬಿ. ಆ ಹುಡುಗಿಗೆ ಎಷ್ಟು ವಯಸ್ಸಿರಬಹುದು? ಕೈಯಲ್ಲಿ ಏನನ್ನು ಹಿಡಿದಿದ್ದಳು?" ಎಂದು ಕೇಳಿದಳು.

"ನಮ್ಮ ವಿಜಯಳ ವಯಸ್ಸಿರಬಹುದು. ಯಾವುದೋ ಒಂದು ಕಾಗದದ ಪೊಟ್ಟಣವಿತ್ತು, ಅವಳ ಕೈಯಲ್ಲಿ ಬಹುಶಃ ಬಟ್ಟೆಯ ಪಾರ್ಸಲಿರಬಹುದಷ್ಟೆ. ಸೇವಕಿ ದೊಡ್ಡದೊಂದು ಬುಟ್ಟಿಯನ್ನು ಹೊತ್ತಿದ್ದಳು. ಹುಡುಗಿ ಬಹಳ ಲಕ್ಷಣವಂತೆ, ಅಮ್ಮಾ. ಅವಳ ತಾಯಿಗೆ ಅದೆಂತಹ ಹುಚ್ಚು ಧೈರ್ಯ! ಈ ಕತ್ತಲಲ್ಲಿ ಆ ಹುಡುಗಿಯನ್ನು ಅದೆಲ್ಲಿಗೆ ಕಳುಹಿಸಿದ್ದಳೋ ಕಾಣೆ. ಇನ್ನು ಮೇಲೆ ಹೀಗೆಲ್ಲಾ ಒಂಟಿಯಾಗಿ ಕಳುಹಿಸಬಾರದೆಂದು ಹುಡುಗಿಯ ತಾಯಿಯನ್ನು ಎಚ್ಚರಿಸಿ ಬಂದೆ. ಈ ಕಗ್ಗತ್ತಲೆಯಲ್ಲಿ ಆ ಕೆಲಸದವಳು ಒಂದು ಜೊತೆಯೇ? ಕಳ್ಳನನ್ನು ಕಂಡೊಡನೆಯೇ ಕೆಲಸದವಳು ಆ ಹುಡುಗಿಗಿಂತ ಗಟ್ಟಿಯಾಗಿ ಕಿರಿಚಿಕೊಂಡಳು" ಎಂದಂದನು.

ಸರಸ್ವತಮ್ಮ ಬಹಳ ನೊಂದುಕೊಂಡು "ಆ ಹುಡುಗಿಯ ತಾಯಿ ಮೇಲೆ ಸಿಟ್ಟುಮಾಡಿಕೊಂಡು ಏನು ಫಲ. ಅಂಬಿ? ಎಲ್ಲ ನಾನು ಮಾಡಿದ

ತಪ್ಪು. ಆ ಹುಡುಗಿ ತಾನು ಹೋಗುತ್ತೇನೆಂದು ಹೇಳಿದರೂ, ಹಿರಿಯವಳಾದ ನಾನು ಹೋಗಬಾರದೆಂದು ತಡೆದಿರಬೇಕು. ಹುಚ್ಚಿ, ಸುಮ್ಮನಿದ್ದು ಬಿಟ್ಟೆ. ಅವಳು ಹೊರಟುಹೋದ ಹತ್ತು ನಿಮಿಷಗಳೊಳಗಾಗಿ ಗಾಡಿಯೂ ಬಂತು. ಗಾಡಿಯನ್ನಾದರೂ ಅವಳ ಹಿಂದೆ ಕಳುಹಿಸಿದ್ದರೆ, ಚೆನ್ನಾಗಿರುತ್ತಿತ್ತು. ಅದೂ ತೋರಲಿಲ್ಲ. ಎಲ್ಲ ನನ್ನ ಧಡ್ಡತನ. ಹೋಗಲಿ ಬಿಡು. ಮಗುವನ್ನು ಭದ್ರವಾಗಿ ಅವಳ ಮನೆಗೆ ತಲುಪಿಸಿ ಬಂದೆಯಲ್ಲಾ" ಎಂದೆಂದು ನಿಟ್ಟುಸಿರು ಬಿಟ್ಟಳು. ಅಂಬಿಗೆ ಈ ವಾಕ್ಯವಾವುದು ಅರ್ಥವಾಗಲಿಲ್ಲ. ಕಕ್ಕಾಬಿಕ್ಕಿಯಾದ.

ಬಳಿಕ ವಿಜಯ ಆ ಹುಡುಗಿ ತನ್ನ ಗೆಳತಿಯೆಂದೂ ತನಗೂ ಅವಳಿಗೂ ಗೆಳೆತನ ಪ್ರಾರಂಭವಾದಂದಿನಿಂದ ಆ ಹುಡುಗಿ ಆ ಹೊತ್ತು ಕಾಲ್ನಡಿಗೆಯಲ್ಲಿ ಮನೆಗೆ ಹೋಗುವ ವರೆಗೂ ಸಾಂಗವಾಗಿ ನಡೆದ ವಿಷಯವನ್ನೆಲ್ಲಾ ಅಣ್ಣನಿಗೆ ಹೇಳಿದಳು.

ಅಂಬಿಯೂ ಸಹ ಆ ಹೊತ್ತು ರಾತ್ರಿಯೆಲ್ಲ ಆ ಸುಂದರಿಯ ನೆನಪಿನಲ್ಲೇ ನಿದ್ರೆಯಿಲ್ಲದೆ ಕಳೆದ. ಆದರೆ, ಆ ಸುಂದರಿ ತನ್ನ ತಂಗಿಯ ನೆಚ್ಚಿನ ಗೆಳತಿ ಎಂಬುದನ್ನೂ, ಅವಳು ಪ್ರತಿನಿತ್ಯ ತಮ್ಮ ಮನೆಗೆ ಬರುತ್ತಿರುತ್ತಾಳೆ ಎಂಬುದನ್ನೂ ಅರಿತು ಅವಳನ್ನು ಮತ್ತೆ ಕಾಣುವ ಭಾಗ್ಯ ತನಗಿದೆಯೆಂದು ತಿಳಿದು ಹಿಗ್ಗಿದ. ಮರುದಿನ ಸಂಜೆ ಎಲ್ಲರೂ ಟಾಕೀಗೆ ಹೋಗಿಬರೋಣವೆಂದು ಅಂಬಿ ಯೋಚನೆ ಹೇಳಿದ. ಅದಕ್ಕೆ ಮಹಾದೇವನ್ ನಾನು ಈ ಹೊತ್ತು ಕ್ಲಬ್ಬಿಗೆ ಬರುತ್ತೇನೆಂದು ಒಬ್ಬ 'ಫ್ರೆಂಡಿ'ಗೆ 'ಪ್ರಾಮಿಸ್' ಮಾಡಿದ್ದೇನೆ. ನೀವೆಲ್ಲ ಹೋಗಿ ಬನ್ನಿ" ಎಂದರು.

ಸರಸ್ವತಮ್ಮ, "ನಾನು ಲಕ್ಷ್ಮಿಯ ಮನೆಗೆ ಹೋಗಿ ಸೀತಮ್ಮನ ಕ್ಷಮೆ ಬೇಡಬೇಕು. ಪಾಪ, ಆ ಹುಡುಗಿಗೆ ಹೆದರಿಕೆಯಲ್ಲಿ ಜ್ವರ ಬಂದಿದೆಯೋ ಏನೋ, ಅಂಬಿ, ನೀನೂ ವಿಜಯಳೂ ಟಾಕೀಗೆ ಹೋಗಿಬನ್ನಿ" ಎಂದಳು.

ಅಷ್ಟರೊಳಗಾಗಿ ವಿಜಯ "ಅದಕ್ಕೇನಂತೆ, ಅಮ್ಮಾ ಎಲ್ಲರೂ ಲಕ್ಷ್ಮಿಯ ಮನೆಗೆ ಹೋಗಿ, ಅಲ್ಲಿಂದ ಲಕ್ಷ್ಮಿಯನ್ನೂ ಕರೆದುಕೊಂಡು ಟಾಕೀಗೆ ಹೋದರಾಯಿತು?" ಎಂದಳು.

ಅದೇ ತರಹ ಎಲ್ಲರೂ ಲಕ್ಷ್ಮಿಯ ಮನೆಗೆ ಹೋಗಿ ಕೊಂಚ ಹೊತ್ತು ಸಂಭಾಷಿಸುತ್ತಲಿದ್ದು, ಲಕ್ಷ್ಮಿಯನ್ನೂ ಸೀತಮ್ಮನನ್ನೂ ಟಾಕೀಗೆ ಕರೆದರು. ಆದರೆ ಸೀತಮ್ಮನು ಲಕ್ಷ್ಮಿಯನ್ನು ಮಾತ್ರ ಅವರುಗಳೊಡನೆ ಕಳುಹಿದಳು. ಸೀತಮ್ಮನೂ ಲಕ್ಷ್ಮಿಯೂ, ಹಿಂದಿನ ದಿನ ಲಕ್ಷ್ಮಿಯನ್ನು ಕಳ್ಳನ ಅವಾಂತರದಿಂದ ಪಾರುಮಾಡಿದ ಯುವಕನು ಅವರೊಡನೆ ಬಂದಿರುವುದನ್ನು ಕಂಡು, ಮೊದಲು ಬಹಳ ಅಚ್ಚರಿಗೊಂಡರು. ಆ ಯುವಕ ವಿಜಯಳ ಅಣ್ಣನೆಂದು ತಿಳಿದ ಬಳಿಕ ಬಹಳ ಆನಂದಪಟ್ಟರು. ಅವನ ಮಹದುಪಕಾರವನ್ನು ಕುರಿತು ವಿಜಯಳ ಹತ್ತಿರವೂ ಸರಸ್ವತಮ್ಮನ ಹತ್ತಿರವೂ ಹೊಗಳಿದರು.

ತನ್ನ ಮನಗಣ್ಣಮುಂದೆ ಸದಾಕಾಲವೂ ತೋರಿ ತನ್ನನ್ನೂ ಬೆರಗುಗೊಳಿಸಿದ ಮನ್ಮಥಸ್ವರೂಪನನ್ನು ಇನ್ನು ಪ್ರತಿನಿತ್ಯ ಕಂಡು ಆನಂದಿಸುವ ಸುಯೋಗ ದೊರಕಿದುದುಕ್ಕಾಗಿ ಮತ್ತಷ್ಟು ಆನಂದ ಲಕ್ಷ್ಮಿಗೆ. ಆದರೆ ಅವಳಿಗೆ ಹೀಗೂ ತೋರಿತು, "ಅವರುಗಳ ಅಂತಸ್ತೇನು? ತನ್ನ ಸ್ಥಿತಿಯೇನು? ತಾನು ಈ ರೀತಿಯಾಗಿ ಮನದೊಳಗೆ ಎಣಿಸುವುದೂ ಕೂಡ ತನ್ನ ದೌರ್ಭಾಗ್ಯ ಸ್ಥಿತಿಗೆ ತಕ್ಕುದಲ್ಲ" ಎಂದು ಮನಸ್ಸಿಗೆ ಒಂದು ರೀತಿಯಾಗಿ ಸಮಾಧಾನ ತಂದುಕೊಳ್ಳುವಳು. ಮನದೊಳಗೆ ಉದ್ಭವಿಸುವ ಆಂದೋಳನವನ್ನು ತಡೆಗಟ್ಟಲು ಯತ್ನಿಸುತ್ತ ಅಂಬಿಯನ್ನು ತನ್ನ ಸ್ವಂತ ಅಣ್ಣನಂತೆ ಭಾವಿಸುತ್ತ, "ಅಣ್ಣಾ, ಅಣ್ಣ ಎಂದೇ ಕರೆಯಲು ಪ್ರಾರಂಭಿಸಿದಳು. ಅಂಬಿಯೂ ಸಹ ಅದೇ ರೀತಿಯಾಗಿ ಅವಳ ವಿಷಯದಲ್ಲಿ ತನಗೆ ಏರ್ಪಟ್ಟಿದ್ದ ಪ್ರೀತಿಯನ್ನು ಅಡಗಿಸಿಕೊಂಡು ಹೊರನೋಟಕ್ಕೆ ಲಕ್ಷ್ಮಿಯನ್ನು ತನ್ನ ತಂಗಿ ವಿಜಯಳಂತೆಯೇ ಕಾಣುತ್ತಿದ್ದ. ದಿನದಿನಕ್ಕೆ ಆ ಹುಡುಗಿಯ ಸೌಂದರ್ಯವನ್ನೂ, ಜಾಣತನವನ್ನೂ, ಸದ್ಗುಣಗಳನ್ನೂ ಕಂಡು ಹಿಗ್ಗುತ್ತಿದ್ದನು.

ಎಂದಿನಂತೆ ಲಕ್ಷ್ಮಿ ಸರಸಮಹಾಲಿಗೆ ಬಂದು ಹೋಗುತ್ತಿದ್ದಳು. ಲಕ್ಷ್ಮಿ, ವಿಜಯ, ಸರಸ್ವತಮ್ಮ, ಅಂಬಿ ನಾಲ್ವರೂ ಕೂಡಿ ಹೊತ್ತುಕಳೆಯಲು ತಮಾಷೆಯಾಗಿ ಇಸ್ಪೀಟ್, ಕೇರಂ, ಚೆಸ್ ಮುಂತಾದ ಆಟಗಳನ್ನು ಆಡುತ್ತಿದ್ದರು. ತೋಟದಲ್ಲಿ 'ಬ್ಯಾಟ್‌ಮಿನ್‌ಟನ್', 'Decktennis'

ಮುಂತಾದ ಬಯಲಿನ ಆಟಗಳನ್ನೂ ಆಡುವರು. ಒಂದೊಂದು ದಿನ ತಮಾಷೆಗಾಗಿ ಮಹಾದೇವನ್‌ರವರೂ ಇವರುಗಳೊಡನೆ ಆಟದಲ್ಲಿ ಕಲೆತು ಕೊಳ್ಳುವರು. ಕೆಲಸಮಯ ಎಲ್ಲರೂ ಒಟ್ಟಿಗೆ ತಿರುಗಾಡಲು ಹೊರಡು ತ್ತಿದ್ದರು. ಕೆಲಸಮಯ ಸರಸ್ವತಮ್ಮ ತಿರುಗಾಡಲು ಬರುವುದಿಲ್ಲವೆಂದರೆ ಅಂಬಿ, ವಿಜಯ, ಲಕ್ಷ್ಮಿ, ಮೂವರು ಮಾತ್ರ ಹೋಗಿ ಬರುತ್ತಿದ್ದರು. ಈ ರೀತಿಯಾಗಿ ಮೂವರೂ ಒಂದೇ ತಾಯಿಮಕ್ಕಳಂತೆ ಬಹಳ ಅನ್ಯೋನ್ಯ ವಾಗಿ ಇರುತ್ತಿದ್ದರು.

ಒಂದು ದಿನ ಬೆಳಿಗ್ಗೆ ಒಂಬತ್ತು ಘಂಟೆಗೆಲ್ಲಾ ಮುನಿಯ ಲಕ್ಷ್ಮಿಯ ಮನೆಗೆ ಗಾಡಿ ಓಡಿಸಿಕೊಂಡು ಬಂದ. ಆಗ ಲಕ್ಷ್ಮಿ ಸ್ನಾನಮಾಡುತ್ತಿದ್ದಳು. ಸೀತಮ್ಮ ಗಾಡಿ ಬಂದುದನ್ನು ಕಂಡು ಬೀದಿಯ ಬಾಗಿಲಿಗೆ ಬಂದು "ಏನೋ ವಿಶೇಷ, ಮುನಿಯಾ? ಬೆಳ್ಳಂ ಬೆಳಿಗ್ಗೆ ಇಷ್ಟು ಬೇಗ ಗಾಡಿ ತಂದಿರುವೆಯಲ್ಲಾ ?" ಎಂದು ಕೇಳಿದಳು.

ಮುನಿಯ ಹಲ್ಲು ಕಿರಿಯುತ್ತ, "ಲಕ್ಷ್ಮಮ್ಮಾವ್ರ್ನ ಈಗಲೇ ಕರತರ ಹೇಳವ್ರೆ. ವಿಜಯಮ್ಮಾವ್ರು ಒಂದು ಚೀಟೀ ಕೊಟ್ಟವ್ರೆ" ಎಂದನ್ನುತ್ತಾ, ಅಂಗಿಯ ಜೇಬಿನಿಂದ ಚೀಟಿಯೊಂದನ್ನು ತೆಗೆದು ಸೀತಮ್ಮನ ಕೈಯಲ್ಲಿ ಕೊಟ್ಟನು. ಸೀತಮ್ಮ ಓದಿ ನೋಡಿದಳು.

ಪ್ರಿಯ ಲಕ್ಷ್ಮಿ,

ಅಣ್ಣನಿಗೆ First Class ನಲ್ಲಿ (ಆನರ್ಸ) ಪರೀಕ್ಷೆ ಪಾಸಾಗಿದೆ ಯೆಂದು ಈ ಹೊತ್ತು ಟೆಲಿಗ್ರಾಂ ಬಂತು. ಈ ಸಂತೋಷವನ್ನು ಕೊಂಡಾಡಲು ಅಮ್ಮನು ಈ ಹೊತ್ತು ಹಬ್ಬದ ಅಡಿಗೆ ಮಾಡಿಸುತ್ತಿದ್ದಾಳೆ. ನೀನಿಲ್ಲದೆ ನನಗೆ ಹಬ್ಬ ಕೊಂಡಾಡುವುದೆಂದರೇ ರುಚಿಸುವುದಿಲ್ಲ. ಅಪ್ಪ ಅಮ್ಮಾ, ಅಂಬಿ ಎಲ್ಲರೂ ನಿನ್ನನ್ನು ಖಂಡಿತ ಈಗಲೇ ಬರುವಂತೆ ಬರೆಯ ಹೇಳಿದರು. ಸಂಜೆ ನಾನೇ ಬಂದು ನಿನ್ನನ್ನು ನಿಮ್ಮ ಮನೆ ತಲುಪಿಸುತ್ತೇನೆ. ನಿನ್ನ ವಿಜಯ"

ಲಕ್ಷ್ಮಿ ಸ್ನಾನ ಮುಗಿಸಿಕೊಂಡು ಬಂದೊಡನೆಯೇ ಸೀತಮ್ಮ ಅವಳಿಗೆ ಬೇಗ ಜಡೆ ಹೆಣೆದು, ಹಣೆಗೆ ಇಟ್ಟು ಸರಸಮಹಾಲಿಗೆ ಕಳುಹಿಸಿ ಕೊಟ್ಟಳು. ಆ ಹೊತ್ತು, ವಿಜಯಳ ಹುಟ್ಟಿದ ಹಬ್ಬದ ದಿನ ತಯಾರಿಸಿದ್ದ ಭಕ್ಷ್ಯಭೋಜ

ಪರವಾನ್ನಾದಿಗಳಿಗಿಂತ ಹೆಚ್ಚು ಆಡಂಬರವಾಗಿಯೇ ಇರಬೇಕೆಂದು ಸರಸ್ವತಮ್ಮ ಅಡಿಗೆಯವನಿಗೆ ಅಪ್ಪಣೆ ಇತ್ತಿದ್ದಳು. ಎಲ್ಲರೂ ಬಹಳ ಖುಷಿಯಾಗಿ ಊಟಮಾಡಿ ಬಂದು ನಡುಮನೆಯಲ್ಲಿ ಕುಳಿತರು. ಅಂಬಿ, ವಿಜಯ, ಸರಸ್ವತಮ್ಮ, ಲಕ್ಷ್ಮಿ ನಾಲ್ವರೂ 'ಕೇರಂ' ಆಡಲು ಉಪಕ್ರಮಿಸಿದರು. ಮಹಾದೇವನ್‌ರವರು ಅಡ್ವೋಕೇಟ್ ಆದುದರಿಂದ ಅವರಿಗೂ ಬೇಸಿಗೆಯ ರಜ ಉಂಟು. ಅವರೂ ಸಹ ಸಾವಕಾಶವಾಗಿ ಬಂದು ಕುಳಿತು ತಾಂಬೂಲ ಸವಿಯುತ್ತ ಅವರುಗಳ ಆಟವನ್ನು ಗಮನಿಸುತ್ತಿದ್ದರು. "ಸರಸೂ, ಅಂಬಿಗಂತೂ ಪರೀಕ್ಷೆ ಪಾಸಾಯಿತು. ಇನ್ನೆರಡು ತಿಂಗಳಲ್ಲಿ ಮೇಲಿನ ವ್ಯಾಸಂಗಕ್ಕಾಗಿ ಇಂಗ್ಲೆಂಡಿಗೆ ಹೊರಟು ಹೋಗುತ್ತಾನೆ. ಅಷ್ಟರೊಳಗಾಗಿ ಎಲ್ಲರೂ ಶೇರ್ವರಾಯ ಬೆಟ್ಟಕ್ಕೆ (HillStation) ಹೋಗಿ ತಮಾಷೆಯಾಗಿ ಹದಿನೈದು ದಿನ ಇದ್ದು ಬಂದರೆ ಚೆನ್ನವಲ್ಲವೇ? ಈ ವರ್ಷ ಬಿಸಿಲಿನ ತಾಪ ಬಹಳ."

ಎಲ್ಲರೂ ಆಟವನ್ನು ನಿಲ್ಲಿಸಿ, ಐಯ್ಯರರ ಮಾತು ಗಮನಿಸಿದರು.

"ಅದಕ್ಕೇನಂತೆ! ಹಾಗೆಯೇ ಮಾಡಿದರಾಯಿತು. ಬೆಟ್ಟದ ಹವ ವಿಜಯಳ ಮೈಗೂ ಒಳ್ಳೆಯದು. ಇನ್ನೂ ಅವಳ ಮೈ ಮುಂಚಿನಂತೆ ಆಗಿಲ್ಲ. ಯಾವಾಗ ಹೊರಡೋಣ?" ಎಂದು ದನಿಗೂಡಿಸಿದಳು ಸರಸ್ವತಮ್ಮ.

"ಶೇರ್ವರಾಯ ಬೆಟ್ಟಕ್ಕೇನಂತೆ, ಹತ್ತಿರದಲ್ಲೇ ಇದೆ. ನಾಳೆಯೇ ಹೊರಟರಾಯಿತು. ಆದರೆ ಅಲ್ಲಿ ಹೋಗಿ ಇಳಿಯಲು ತಕ್ಕ ಸ್ಥಳ ಏರ್ಪಾಟು ಮಾಡಿಕೊಂಡ ಬಳಿಕಲ್ಲವೇ ನಾವು ಹೊರಡುವ ಯೋಚನೆ?" ಎಂದನು, ಅಂಬಿ.

ಐಯ್ಯರ್, "ಈ ಏರ್ಪಾಟುಗಳನ್ನೆಲ್ಲ ಮಾಡದೆ ನಿಮ್ಮ ಮುಂದೆ ಈ ಮಾತು ತೆಗೆಯುತ್ತೇನೆಯೆ? ನಮ್ಮ ಯತಿರಾಜುಲು ವೊದಲಿಯಾರ್ರು ಇಲ್ಲವೇ? ಅವರು ತಮ್ಮ ಬಂಗಲೆಯನ್ನು ಒಂದು ತಿಂಗಳ ಉಪಯೋಗಕ್ಕಾಗಿ ನಮಗೆ ಬಿಟ್ಟು ಕೊಡುವುದಾಗಿ 'ಪ್ರಾಮಿಸ್' ಮಾಡಿರುವರು. 'ಈ ಹೊತ್ತಿನಿಂದಲೇ ಬೇಕಾದರೂ ಮನೆಯನ್ನು ಉಪಯೋಗಿಸಿಕೊಳ್ಳಿ' ಎಂದು ನಿನ್ನೆ ಕ್ಲಬ್ಬಿನಲ್ಲಿ ಅಂದರು. ಮನೆಗೆ ಇದೇ ತಾನೇ ಸುಣ್ಣ

ಬಣ್ಣ ಬಳಿದಿದ್ದಾರಂತೆ. ಬಂಗಲೆಯಲ್ಲಿ 'ಲೈಟ್' ಕೊಳಾಯಿ........ಎಲ್ಲ ಸೌಕರ್ಯಗಳೂ ಇರುವವಲ್ಲದೆ ಮನೆಯಲ್ಲಿ ಎಲ್ಲವೂ ಸಿದ್ಧವಿದೆಯಂತೆ. (fully furnished house) ಸರಸೂ, ಇದೀಗಲೇ ಸಾಮಾನುಗಳನ್ನೆಲ್ಲ ಕಟ್ಟಿಡೆಂದು ನಾರಾಯಣನಿಗೆ ಹೇಳಿಬಿಡು. ನೀವೆಲ್ಲ ಇಪ್ಪತ್ತು ದಿನಗಳಿಗೆ ಬೇಕಾಗುವಷ್ಟು ಬಟ್ಟೆಬರೆಗಳನ್ನು ತಯಾರಾಗಿ 'ಪ್ಯಾಕ್' ಮಾಡಿಡಿ. ನಾನೀಗ ಯತಿರಾಜುಲುವಿಗೆ ಚಿಟ್(chit) ಬರೆದು ಕಳುಹಿಸಿಬಿಡುತ್ತೇನೆ" ಎಂದಂದು ಸೋಫಾವಿನಿಂದ ಎದ್ದು ತಮ್ಮ ಆಫೀಸು ರೂಮಿಗೆ ಹೋದರು.

ವಿಜಯ ತನ್ನ ತಾಯ ಮಡಿಲಲ್ಲಿ ಕೈಯೂರಿ ಆಕೆಯ ಭುಜದಲ್ಲಿ ಒರಗಿಕೊಂಡು, "ಅಮ್ಮಾ, ಅಮ್ಮಾ, ಏರ್ಕ್ಕಾಡಿಗೆ (ಶೇರ್ವರಾಯ ಬೆಟ್ಟಕ್ಕೆ ಈ ಹೆಸರೂ ಉಂಟು,) ಲಕ್ಷ್ಮಿಯನ್ನೂ ಕರೆದುಕೊಂಡು ಹೋಗೋಣ ಅಮ್ಮಾ." ಎಂದು ಅಂಗಲಾಚಿದಳು.

"ಅದಕ್ಕೇನಂತೆ, ಕರೆದುಕೊಂಡು ಹೋದರಾಯಿತು. ಸಾಯಂಕಾಲ ಹೋಗಿ ಅವರಮ್ಮನನ್ನು ಕೇಳೋಣ. ಆಕೆ ಒಪ್ಪಿ, ನಮ್ಮ ಸಂಗಡ ಕಳುಹಿದರೆ ಕರೆದುಕೊಂಡು ಹೋದರಾಯಿತು. ಅಲ್ಲಿ ನಿನಗೂ ಹೊತ್ತು ಹೋಗಬೇಕಲ್ಲಾ. ಲಕ್ಷ್ಮಿಯೂ ಶೇರ್ವರಾಯ ಬೆಟ್ಟವನ್ನು ನೋಡಿದಂತಾಗುವುದು." ಎಂದಳು.

ಅಂಬಿ "ಅಮ್ಮಾ, ವಿಜಯಳ ಸಾಮಾನುಗಳೇ ಒಂದು ಗಾಡಿಯ ತುಂಬ ಆಗಬಹುದಲ್ಲಾ !........" ಎಂದು ಹಾಸ್ಯ ಮಾಡಿದ.

"ಮಗುವನ್ನು ಏಕೋ ಹಾಸ್ಯ ಮಾಡುತ್ತೀ ? ನೀನೂ ಬೇಕಾದರೆ ಅವಳಿಗಿಂತ ಹತ್ತರಷ್ಟು ಕಟ್ಟಿಕೊಂಡು ಬಾ ! ಎರಡು ಗಾಡಿ ತುಂಬಿದರಾಯಿತು. ನೀನೇನೂ ಹೊರಡಬೇಕಾಗಿಲ್ಲವಲ್ಲಾ."

"ಆಟ ಸಾಕಮ್ಮಾ, ನಾನು ಹೋಗಿ 'ಪ್ಯಾಕ್' ಮಾಡುತ್ತೇನೆ." ಎಂದು ಎದ್ದೇಬಿಟ್ಟ ಅಂಬಿ.

ವಿಜಯ "ಅಮ್ಮಾ, ನನ್ನನ್ನು ಮಾತ್ರ ಹಾಸ್ಯ ಮಾಡುತ್ತಾನಲ್ಲಾ, ಈ ಅಣ್ಣ ! ಅವನನ್ನು ಬೇಕಾದರೆ ನೋಡುತ್ತಿರು, 'ಷೇವಿಂಗ್ ಸೆಟ್ಟ' ಗೊಂದು ಪೆಟ್ಟಿಗೆ; ಸೂಟ್, ಟೈ ಇವಕ್ಕೆಲ್ಲ ಒಂದು ಪೆಟ್ಟಿಗೆ, ಪಂಚೆ,

ಟವಲು, ಷರ್ಟು........ಇದಕ್ಕೆಲ್ಲ ಒಂದು ಪೆಟ್ಟಿಗೆ; ಇಷ್ಟಲ್ಲದೆ 'ಕ್ಯಾಮರಾ', 'ದುರ್ಬೀನು'........ಇಂತಹ ಸಾಮಾನುಗಳಿಗೊಂದು ಪೆಟ್ಟಿಗೆ; ಈ ರೀತಿಯಾಗಿ ಹೊರೆಹೊರೆಯಾಗಿ ಸಾಮಾನುಗಳು ತರುತ್ತಾನೆ!" ಎಂದು ಅಣ್ಣನನ್ನು ಕೋಟಾ ಮಾಡಿದಳು.

ಅಂಬಿ "ಸುಮ್ಮ ಸುಮ್ಮನೆ ಬಾಯಿಗೆ ಬಂದಂತೆ ಅನ್ನಬೇಡ. ನಿನಗೇನು ಗೊತ್ತುಂಟು, ಸಾಮಾನು ಕಟ್ಟುವ ಶ್ರಮ? ನಿನಗೆ ಬೇಕು ಬೇಕಾದುದನ್ನೆಲ್ಲ ಲಕ್ಷ್ಮಿ ಕಟ್ಟಿ ಇಟ್ಟು ಬಿಡುತ್ತಾಳೆ. ಕುಳಿತ ಜಾಗದಿಂದ ಎಲ್ಲರನ್ನೂ ತಮಾಷೆ ಮಾಡುತ್ತೀರು, ಅಷ್ಟೇ" ಎಂದನು.

ಲಕ್ಷ್ಮಿ, "ಸಿಟ್ಟುಮಾಡಿಕೊಳ್ಳಬೇಡಿ, ಅಣ್ಣಾ. ನಿಮಗೂ ಬೇಕಾದರೆ ಪ್ಯಾಕ್ ಮಾಡಿ ಕೊಡಲೇ?" ಎಂದನ್ನಲು, ಎಲ್ಲರೂ ಅಷ್ಟಕ್ಕೇ ಆಟ ನಿಲ್ಲಿಸಿ ಎದ್ದರು. ಸರಸ್ವತಮ್ಮ ಅಡಿಗೆಯ ಮನೆಗೆ ಹೋದಳು.

ಲಕ್ಷ್ಮಿ ವಿಜಯಳಿಗೆ ಬೇಕಾದಂತಹ ಸಾಮಾನುಗಳನ್ನು ತೆಗೆದು ಕಟ್ಟುತ್ತಾ ನಡುನಡುವೆ ಅಂಬಿಗೂ ಸಹಾಯ ಮಾಡುತ್ತಿದ್ದಳು. ವಿಜಯ, ಲಕ್ಷ್ಮಿಗೆ ತನ್ನ ಕೈಲಾದ ಒತ್ತಾಸೆ ಮಾಡಲು ಬಂದಳು. ಸರಸ್ವತಮ್ಮ ತನಗೂ, ತನ್ನ ಗಂಡನಿಗೂ ಅವಶ್ಯಕವಾದಂತಹವುಗಳನ್ನು ತೆಗೆದಿಟ್ಟು ಸಿದ್ದನನ್ನು ಪ್ಯಾಕ್ ಮಾಡಹೇಳಿ ಮನೆಯಲ್ಲಿ ಭದ್ರಪಡಿಸಬೇಕಾದುವುಗಳನ್ನು ಭದ್ರಪಡಿಸಿ, ಬೀಗ ಹಾಕಬೇಕಾವ ಕೊಠಡಿಗಳನ್ನು ಬೀಗ ಹಾಕಿ, ಆಳುಗಳಿಗೆ ಹೇಳಬೇಕಾದ ಸೂಚನೆಗಳನ್ನಿತ್ತು ಬಹಳ ಮುಜುಗರದಿಂದಿದ್ದಳು.

ನಾಲ್ಕು ಘಂಟೆ ಹೊಡೆದಾಕ್ಷಣ ಎಲ್ಲರೂ 'ಟಿಫನ್ ಕಾಫೀ' ತೆಗೆದುಕೊಂಡು ಹೊರಗೆ ಹೊರಡಲು ಅನುವಾದರು. ಅಂಬಿಯೂ, ಮಹಾದೇವನ್'ರೂ ಮೋಟರಲ್ಲಿ ಹತ್ತಿ ಕುಳಿತು ಅದೆಲ್ಲಿಗೋ ಹೊರಟುಹೋಗಲು ವಿಜಯ, ಸರಸ್ವತಮ್ಮ, ಲಕ್ಷ್ಮಿ ಮೂವರೂ 'ಕೋಚ್'ಗಾಡಿಯಲ್ಲಿ ಕುಳಿತು ಸೀತಮ್ಮನ ಮನೆಗೆ ಹೊರಟರು.

ಸೀತಮ್ಮನ ಸಂಗಡ ಕೊಂಚ ಹೊತ್ತು ಮಾತನಾಡುತ್ತಿದ್ದು, ತಾವು ಮರುದಿನ ಸಂಜೆ, ಶೇರ್ವರಾಯ ಬೆಟ್ಟಕ್ಕೆ ಹೋಗುತ್ತೇವೆಂದೂ,ಲಕ್ಷ್ಮಿಯೂ ಸಹ ತಮ್ಮೊಡನೆ ಬರುವುದಾದರೆ ಬಹಳ ಸಂತೋಷವೆಂದೂ ಸರಸ್ವತಮ್ಮ

ಅಂದರು. ಸೀತಮ್ಮನಿಗೆ ಲಕ್ಷ್ಮಿಯನ್ನು ಕಳುಹಲು ಅರೆ ಸಮ್ಮತವಾಗಿತ್ತು. ಆದರೆ ಅಷ್ಟೊಂದು ದೊಡ್ಡ ಮನುಷ್ಯರು ಅಕ್ಕರೆಯಿಂದ ಕರೆಯುವಾಗ ತಾನು ಕಳುಹಿಸದಿದ್ದರೆ ಒಳಿತಲ್ಲವೆಂದು ಹಿಂಜರಿಯುತ್ತ ಕಳುಹಲು ಒಪ್ಪಿದಳು. ಮರುದಿನ ಬೆಳಿಗ್ಗೆ ಒಂಬತ್ತು ಘಂಟೆಗೆ ಸರಿಯಾಗಿ ಗಾಡಿಕಳುಹಿಸುವುದಾಗಿ ಹೇಳಿ, ಲಕ್ಷ್ಮಿಗೆ ಸಾಮಾನುಗಳನ್ನು ಕಟ್ಟಿ ತಯಾರಾಗಿ ಇಟ್ಟುಕೊಳ್ಳಲು ಹೇಳಿ ಸರಸ್ವತಮ್ಮನೂ ವಿಜಯಳೂ ಸಂಜೆ ಏಳು ಘಂಟೆಗೆ ತಮ್ಮ ಮನೆಗೆ ಹಿಂದಿರುಗಿದರು.

೯

ಮರುದಿನ ಬೆಳಿಗ್ಗೆ ಲಕ್ಷ್ಮಿ ತನ್ನ ಹಾಸಿಗೆ ಪೆಟ್ಟಿಗೆಗಳ ಸಹಿತ ಸರಸಮಹಾಲನ್ನು ಬಂದು ತಲುಪಿದಳು. ಮುಂಜಾನೆಯೇ ಮಹಾದೇವನ್‌ರವರು ಆಳುಗಳನ್ನೂ ಸಾಮಾನುಗಳನ್ನೂ ಎರ್ಕಾಡಿಗೆ ಕಳುಹಿಸಿಬಿಟ್ಟಿದ್ದರು.

ಮಿಕ್ಕವರೆಲ್ಲ ಸಂಜೆ ಐದು ಘಂಟೆಯ ಸುಮಾರಿಗೆ ಬೆಟ್ಟಕ್ಕೆ ಹೊರಡುವುದೆಂದು ಏರ್ಪಾಟು. ಐದು ಘಂಟೆಗೆ ಸರಿಯಾಗಿ ಅಂಬಿ ಕಾರನ್ನೂ ತಂದು ಬಾಗಿಲಲ್ಲಿ ನಿಲ್ಲಿಸಿದನು. ಹೆಂಗಸರ ಉಪಯೋಗಕ್ಕೆಂದು ಒಂದು 'ಕೋಚ್' ಗಾಡಿಯನ್ನೂ ಸ್ವಂತ ಉಪಯೋಗಕ್ಕೆಂದು ಕಾರನ್ನೂ ಮಹಾದೇವನ್ ಇಟ್ಟುಕೊಂಡಿದ್ದರಾದುದರಿಂದ ಡ್ರೈವರ್ ಇಟ್ಟುಕೊಂಡಿರಲಿಲ್ಲ. ಕಾರ್ ಬಂದು ನಿಂತೊಡನೆಯೇ ಮಹಾದೇವನ್‌ರವರು ಮುಂದಿನ ಸೀಟಿನಲ್ಲಿ ಅಂಬಿಯ ಹತ್ತಿರ ಕುಳಿತರು. ಹಿಂದಿನ ಸೀಟಿನಲ್ಲಿ ಹೆಂಗಸರು ಮೂವ್ವರೂ ಕುಳಿತುಕೊಳ್ಳಲು ಕಾರು ಹೊರಟಿತು.

ಶೇಲಂನಿಂದ ಬೆಟ್ಟದ ತಪ್ಪಲಿಗೆ ಎರಡು ಮೂರು ಮೈಲಿ ದೂರವಿರಬಹುದಷ್ಟೇ. ಆದ್ದರಿಂದ ಬಹಳ ಬೇಗನೆ ಅವರುಗಳು ಬೆಟ್ಟದ ತಪ್ಪಲನ್ನು ತಲುಪಿದರು. ಅಂಬಿ ಮೋಟರನ್ನು ನಿಲ್ಲಿಸಿ ಪ್ರಯಾಣಕ್ಕೆ ಅವಶ್ಯಕವಾದಂತಹ ನೀರು ಪೆಟ್ರೋಲ್ ಮುಂತಾದುವು ಸಾಕಷ್ಟು ಇವೆಯೇ ಎಂದು ಎಂಜಿನನ್ನೂ ಒಂದು ಸಲ ಪರಿಶೀಲಿಸಿ ನೋಡಿಕೊಂಡನು.

ಲಕ್ಷ್ಮಿ ಶೇರ್ವರಾಯ ಬೆಟ್ಟಕ್ಕೆ ಬರುವುದು ಇದೇ ಮೊದಲು ಬಾರಿ.

ಆದುದರಿಂದ ಈ ಬೆಟ್ಟದ ಪ್ರಯಾಣವು ಅವಳಿಗೆ ವಿಪರೀತ ಆಶ್ಚರ್ಯ ವನ್ನು ಉಂಟುಮಾಡಿತು. ವಿಜಯಳ ಮನೆತನದವರು ಪದೇಪದೇ ಏರ್ಕಾಡಿಗೆ ಹೋಗಿಬರುವುದು ಬಳಕೆಯಲ್ಲಿ ಇದ್ದುದರಿಂದ ಅವರಿಗೆಲ್ಲ ಅಷ್ಟೊಂದು ಆಶ್ಚರ್ಯವೆನಿಸಲಿಲ್ಲ.

ಲಕ್ಷ್ಮಿ ಮೆಲುಧನಿಯಲ್ಲಿ " ವಿಜಯಾ, ಈ ರಸ್ತೆಯನ್ನು ನೋಡೇ. ಒಂದು ಕಡೆ ಪಾತಾಳ, ಮತ್ತೊಂದು ಕಡೆ ಎತ್ತರದ ಬೆಟ್ಟ! ಇಂತಹ ವಂಕಿಗಳು (HairPin Bends) ಇನ್ನೆಷ್ಟು ಬರುತ್ತವೆ? ಪಾಪ, ಅಣ್ಣನಿಗೆ ಕಾರು ಓಡಿಸುವುದು ಬಹಳ ಶ್ರಮವಲ್ಲವೇ?" ಎಂದು ಕೇಳಿದಳು.

"ಅವನು ಕಾರು ಓಡಿಸುವುದರಲ್ಲಿ ನಿಪುಣ. ಇಂತಹ ವಂಕಿಗಳು ಇನ್ನೂ ಹನ್ನೊಂದಿವೆ! ಈಗಲೇ ಹೆದರಿ ಬಿಟ್ಟೆಯಲ್ಲಾ!'' ಎಂದು, ಅವಳನ್ನು ಹಾಸ್ಯ ಮಾಡುವ ಧ್ವನಿಯಲ್ಲಿ ವಿಜಯ ಹೇಳಿದಳು.

ಆದರೆ ಲಕ್ಷ್ಮಿಯಾದರೋ, ಅಲ್ಲಿ ತಾನು ಕಂಡ ಪ್ರಕೃತಿ ಸೌಂದರ್ಯದಲ್ಲಿ ಲಯವಾದಳು " ಬೆಟ್ಟದ ಮೇಲೆ ಹೋಗುತ್ತ ಹೋಗುತ್ತ ಬಹಳ ರಮಣೀಯವಾಗಿದೆಯಲ್ಲವೇ! ದಟ್ಟವಾದ ಕಾಡೂ, ಗಗನವನ್ನು ಮುಟ್ಟುವಂತಹ ಎತ್ತರದ ಮರಗಳೂ, ಅಂದವಾದ ಪುಷ್ಪಿತ ಗಿಡ,ಮರ, ಬಳ್ಳಿಗಳೂ ಕಣ್ಣಿಗೆ ಹಬ್ಬವಾಗಿವೆ. ಆಗೋ, ಆ ಪೊದರಿನಿಂದ ಎಷ್ಟೊಂದು ದೊಡ್ಡ ಮೊಲ ಓಡಿಹೋಗುತ್ತಿದೆ! ಇತ್ತ ಈ ಮರದ ಮೇಲೆ ನೋಡು. ಬಣ್ಣ ಬಣ್ಣದ ಪಕ್ಷಿಗಳು ಗುಂಪು ಗುಂಪಾಗಿ ಕುಳಿತಿವೆ!" ಎಂದು ಲಕ್ಷ್ಮಿ ತನ್ನ ಉತ್ಸಾಹವನ್ನು ವ್ಯಕ್ತಗೊಳಿಸಿದಳು.

''ಲಕ್ಷ್ಮೀ, ಆಗೋ ನೋಡು! ನಡು ನಡುವೆ ಅವಿತು ಕೊಂಡು ಓಡುತ್ತಿರುವ ಕಾಲುವೆಗಳ ಸಪ್ಪಳ 'ಜೋ' ಎಂದು ಕೇಳುತ್ತಿದೆ.'' ಎಂದು ವಿಜಯ ಒಂದು ಕಡೆ ಕೈತೋರಿಸಿದಳು.

''ಹೌದು, ಆ ಸದ್ದಿನ ಜೊತೆಯಲ್ಲಿ, ಪಕ್ಷಿಗಳ ಇಂಪುಗಾನವೂ, ಗಾಳಿಗೆ ಅಲುಗಾಡುವ ಮರಗಳ ಸುಯ್, ಶಬ್ದವೂ ಒಟ್ಟಿಗೆ ಸೇರಿ ಕೇಳಲು ಅದೆಷ್ಟು ಇಂಪಾಗಿದೆ! ಈ ಸಣ್ಣ ಪುಟ್ಟ ಜಲಪಾತಗಳ ನೀರು ರಸ್ತೆಯ ಮೇಲೆ ಹರಿದು ರಸ್ತೆಯನ್ನು ಕೊರೆಯಿಸಿ ಕೆಡಿಸದಂತೆ ಇರುವುದಕ್ಕಾಗಿ

ಈ ರೀತಿ ಮೇಲಿಂದ ನೀರು ಬೀಳುವ ಸ್ಥಳಗಳಿಗೆಲ್ಲ ಸೇತುವೆಗಳನ್ನು (Bridges) ಕಟ್ಟಿಸಿದ್ದಾರೆಂದು ಕಾಣುತ್ತೆ.'' ಎಂದಳು ಲಕ್ಷ್ಮಿ.

ವಿಜಯ ಇದನ್ನು ನೋಡಿ ಅಚ್ಚರಿಗೊಂಡು " ಅಪ್ಪಾ ! ಈ ಸೇತುವೆಗಳ ಪಕ್ಕದಲ್ಲಿ ಕಟ್ಟಿದ ತೊಟ್ಟಿಗಳಲ್ಲಿ ಬಿದ್ದ ನೀರು ಎಲ್ಲಿಗೆ ಹೋಗುತ್ತೆ ? " ಎಂದು ಕೇಳಿದಳು.

' ಈ ಪ್ರಮಾದಕ್ಕೆ ಹೋಗಿ ಅಪ್ಪಾವರನ್ನು ಕೇಳಿ ತಿಳಿಯಬೇಕೇನೇ ? ಅಗೋ ರಸ್ತೆಯ ಕೆಳಭಾಗದಲ್ಲಿ ಜಲಧಾರೆಗಳನ್ನೂ ಸೇತುವೆಗಳನ್ನೂ (Under ground drainage) ಕಟ್ಟಿಸಿದ್ದಾರೆ, ಕಾಣೋಲ್ಲವೇ ? ರಸ್ತೆಯ ಮತ್ತೊಂದು ಪಾರ್ಶ್ವದಲ್ಲಿ ಪಾತಾಳ ಕಡೆಗೆ ನೀರು ಸುರಿಯುತ್ತಿರುವುದನ್ನು ಮುಂದಿನ ಜಲಪಾತವಲ್ಲಿ ತೋರಿಸುತ್ತೇವೆ, ನಿಲ್ಲು'' ಎಂದು ಸಮಾಧಾನಹೇಳಿ ಲಕ್ಷ್ಮಿ ಅಂಬಿಯನ್ನು ಕುರಿತು, " ಈಗ ನಾವು ಬೆಟ್ಟವನ್ನೆಷ್ಟು ಎತ್ತರ ಹತ್ತಿದ್ದೇವೆ ಅಣ್ಣಾ ? " ಎಂದು ಕೇಳಿದಳು.

"ಅರ್ಧಕ್ಕೆ ಮೇಲೆ ಬಂದು ಬಿಟ್ಟಿದ್ದೇವೆ. ಇಗೋ ನೋಡು, ರಬ್ಬರ್ ತೋಟಗಳು ಸೊಂಪಾಗಿ ಬೆಳೆದಿವೆ ! "

" ಅಣ್ಣಾ, ಆ ಗಿಡಗಳ ಹೆಸರೇನು ? "

" ಅದು ಕಾಫೀ ತೋಟ. ಆ ಎತ್ತರದ ಮರಗಳು ಕಾಫೀ ಗಿಡಗಳನ್ನು ಬಿಸಿಲಿನ ತಾಪದಿಂದ ಕಾಪಾಡಲು ಬೆಳೆಸಲ್ಪಟ್ಟ ಒಂದು ಜಾತೀಯ ಮರಗಳು. "

" ಅಮ್ಮಮ್ಮಾ, ಈ ಮರಗಳು ಅದೆಷ್ಟು ಎತ್ತರ ಬೆಳೆದಿವೆ! ಮಾಮೀ, ನೋಡಿ. ಸಂಧ್ಯಾಕಾಲದ ಎಳೆ ಬಿಸಿಲಲ್ಲಿ ಆ ಮರದ ಎಲೆಗಳು 'ಥಳಥಳ'ನೆ ಬೆಳ್ಳಿಯ ಎಲೆಗಳಂತೆ ಮಿನುಗುತ್ತಿವೆ ! " ಎಂದು ವಿಸ್ಮಯಗೊಂಡಳುಲಕ್ಷ್ಮಿ.

" ರೈಟೋ (Riahto) ಲಕ್ಷ್ಮಿ! ಅವುಗಳ ಹೆಸರೇ ಸಿಲ್ವರ ಓಕ (Silver oak) ಎಂದು! " ಎಂದು ಮಹಾದೇವನ್‌ರವರು ಸೂಚಿಸಿದರು.

" ಅಬ್ಬಬ್ಬಾ! ತಂಗಾಳಿ ಎಷ್ಟು ಸುಖವಾಗಿದೆ! ಶೇಲಂನ ಶೆಖೆಗೆ ಬೆಂದು ಹೋದ ನಮಗೆ ಈಗ ಎಷ್ಟು ಸುಖಮಯವಾಗಿದೆ! " ಎಂದು ಉಸಿರಿಟ್ಟಳು ಸರಸ್ವತಮ್ಮ.

" ಮಾಮೀ, ಸೂರ್ಯನೂ ಕೂಡ ನಮಗೆ ಸುಖಾಗಮನ ಬಯಸುತ್ತಿರುವಂತೆ ತನ್ನ ಹೊಂಗಿರಣಗಳನ್ನು ನಮ್ಮ ಮೇಲೆ ಹರಡಿರುವನು ನೋಡಿ. ಇಲ್ಲಿ ಕಾಫೀ ತೋಟಗಳಲ್ಲೂ ರಬ್ಬರ್ ತೋಟಗಳಲ್ಲೂ ವಾಸಿಸುವ ಬೆಟ್ಟದ ವಾಸಿಗಳಿಗೂ ಬೇಸಿಗೆಗಾಗಿ ಬೆಟ್ಟಕ್ಕೆ ಬಂದಿರುವವರಿಗೂ ಅವಶ್ಯಕವಾಗುವಂತಹ ಪದಾರ್ಥಗಳಿಗೆ ಅವರೇನು ಮಾಡುವರು ? ಶೇಲಂಗೆ ಹೋಗಿ ತಂದುಕೊಳ್ಳಬೇಕೆ ? "

" ಬೆಟ್ಟದ ಮೇಲೆ ಹಲವು ಸಣ್ಣಪುಟ್ಟ ಗ್ರಾಮಗಳಿವೆ. ಅವುಗಳಲ್ಲಿ ಏರ್ಕಾಡೇ ಪ್ರಧಾನವಾದದ್ದು; ದೊಡ್ಡ ಊರು. ಅಲ್ಲಿ ಪ್ರತಿ ಭಾನುವಾರ ಸಂತೆ ಕೂಡುವುದು. ಆಗ ಬೆಟ್ಟದ ಮೇಲೆ ವಾಸಿಸುವರೆಲ್ಲ ಅಲ್ಲಿಗೆ ಬಂದು ಬೇಕುಬೇಕಾದುದನ್ನೆಲ್ಲ ಕೊಂಡುಕೊಳ್ಳುವರು " ಎಂದರು ಸರಸ್ವತಮ್ಮ

" ಅಮ್ಮಾ ನಾವು ಮಾತನಾಡುತ್ತಾ ಬಂದುದರಲ್ಲಿ ಕ್ಷಣಮಾತ್ರದಲ್ಲಿ ಬೆಟ್ಟದ ಹತ್ತಿ ಬಂದಂತೆ ತೋರುತ್ತದೆಯಲ್ಲವೇ! ಇಗೊ ನೋಡು, ಏರ್ಕಾಡು ಊರನ್ನು ಸಮೀಪಿಸಿ ಬಿಟ್ಟಿದ್ದೇವೆ! ಇಗೋ ಸುಂಕದ ಗೇಟನ್ನು ದಾಟಿದುದಾಯಿತು. ಕೆರೆಯೂ ಸಹ ಕಾಣುತ್ತದೆ " ಎಂದು ನಡುವೆ ಮಾತನಾಡಿದಳು.

" ನಾವು ಇಳಿಯಬೇಕಾದ ಬಂಗಲೆ ಇಲ್ಲೇ ಇದೆಯೇನು ? " ಎಂದು ಲಕ್ಷ್ಮಿ ಕೇಳಿದಳು.

" ಇಲ್ಲಿಲ್ಲ. ಅದು ಎಸ್ಟೇಟಿನಲ್ಲಿದೆ. ಈ ಊರಿಂದ ಸುಮಾರು ಒಂದು ಮೈಲಿಗಾಜೆ ಇದೆ. ಊರೊಳಗೂ ಬಾಡಿಗೆಗೆ ಬಂಗಲೆ ಸಿಗುತ್ತದೆ. ' ಎಸ್ಟೇಟು 'ಗಳ ಮಾಲೀಕರು ಅನೇಕ ಮಂದಿ ಊರಿನ ಸುತ್ತಮುತ್ತಲೂ ಹತ್ತು ಹದಿನೈದು ಮೈಲಿಗಳವರೆಗೂ ತಮ್ಮ ಸ್ವಂತ ಎಸ್ಟೇಟುಗಳಲ್ಲೇ ಬಂಗಲೆಗಳನ್ನು ಕಟ್ಟಿಕೊಂಡಿರುವರು " ಎಂದು ಐಯ್ಯರು ಬದಲಿತ್ತರು.

" ಊರು ದೊಡ್ಡದಾಗಿಯೇ ಇದೆ. ಅಗೋ ' ಕಾನ್‌ವೆಂಟ್ ' ಸ್ಕೂಲು ! ಆ ದೊಡ್ಡ ಕಟ್ಟಡದ ಮುಂದೆ ಬೋರ್ಡು ತಗಲುಹಾಕಿದೆಯಲ್ಲಾ ಅದರ ಸಮೀಪದಲ್ಲಿ ಚರ್ಚು ಇರುವಂತಿದೆ " ಎಂದು ಲಕ್ಷ್ಮಿ ಸೂಚಿಸಿದಾಗ

ಐಯ್ಯರವರು " ಹೌದು, ಇಲ್ಲಿ ಸುಮಾರು ಅರ್ಧಪಾಲಿಗಿಂತ ಹೆಚ್ಚು ಜನಸಂಖ್ಯೆ ಯುರೋಪಿಯನರು ವಾಸಿಸುತ್ತಾರೆ. ತಂಪಾದ ಪ್ರದೇಶ ವಾದುದರಿಂದ ಅವರಿಗೆ ಪ್ರಿಯವಾದ ಜಾಗವಿದು. ಕ್ಲಬ್, ಟಾಕೀ........ ಮುಂತಾದ ಎಲ್ಲ ಸೌಕರ್ಯಗಳೂ ಇವೆ. ಇಗೋ ಬಂಗಲೆ ಬಂತು ! " ಎಂದೆನ್ನುವಾಗಲೇ ಕಾರು ಬಂಗಲೆಯ ಕಾಂಪೌಂಡಿನೊಳಗೆ ನುಗ್ಗಿತು.

ಬಂಗಲೆಯ ಮುಂದೆ ಕಾರು ಬಂದು ನಿಲ್ಲಲು ಒಬ್ಬೊಬ್ಬರಾಗಿ ಕಾರಿನಿಂದ ಇಳಿಯತೊಡಗಿದರು. ಲಕ್ಷ್ಮಿ ಒಂದು ಕೈಯಲ್ಲಿ ಸಣ್ಣದೊಂದು ಕೈಪೆಟ್ಟಿಗೆನ್ನೂ ( Hand bag ) ಮತ್ತೊಂದು ಕೈಯಲ್ಲಿ ಹೂಜಿ ಯನ್ನೂ ತೆಗೆದುಕೊಂಡು ಇಳಿದಳು. ವಿಜಯ ಬರೀ ಕೈಯಲ್ಲಿ ಇಳಿಯು ವುದನ್ನು ಕಂಡು ಸರಸ್ವತಮ್ಮ, " ವಿಜಯಾ, ಈ ಶಾಲನ್ನಾದರೂ ತೆಗೆದುಕೊಂಡು ಇಳಿಯಬಾರದೇ ? ಯಾವಾಗ ನೀನು ಇದೆಲ್ಲ ಮಾಡಲು ಕಲಿಯುವುದು ? ಲಕ್ಷ್ಮಿಯನ್ನು ನೋಡಿಯಾದರೂ ಕಲಿಯಬಾರದೇ ? " ಎಂದಂದು ತಾನೂ ಕೆಳಗಿಳಿದಳು. ಕಾರಿನಿಂದ ಇಳಿಯುವುದು ಸರಸ್ವತ ಮ್ಮನಿಗೆ ಕೊಂಚ ಶ್ರಮವಾಗಿಯೇ ಇತ್ತು. ಮಹಾದೇವನ್‌ರವರು ಬಂದು ಸರಸ್ವತಮ್ಮನ ಕೈ ಹಿಡಿದು ಮೆಲ್ಲಗೆ ಇಳಿಸುವಾಗ, ಅಂಬಿ ಚಪ್ಪಾಳೆ ತಟ್ಟುತ್ತ ನಗಲಾರಂಭಿಸಿದನು.

" ಲಕ್ಷ್ಮೀ, ವಿಜಯಾ, ಓಡಿಹೋಗಿ ತಟ್ಟೆಯಲ್ಲಿ ಆರತಿ ತಂದು ಇವರಿಬ್ಬರಿಗೂ ಬೆಳಗಿ ! ಅಪ್ಪಾ, ಅಮ್ಮನ ಕೈಹಿಡಿದುಕೊಂಡು ಕೊಂಚ ಹಾಗೆಯೇ ನಿಲ್ಲಬಾರದೇ ? ಅಷ್ಟರೊಳಗೆ ಬಿಟ್ಟುಬಿಡಬೇಕೇ ? " ಎಂದು ಹಾಸ್ಯ ಮಾಡಿದನು.

ಸರಸ್ವತಮ್ಮ " ಹೋಗೋ ಅಂಬಿ ನಿನಗೆ ಬೇರೆ ಕೆಲಸವಿಲ್ಲವೇನು " ಎಂದಂದು, ಆದೇ ತಾನೇ ಮದುವೆಯಾದ ಮದುವಣಗಿತ್ತಿಯಂತೆ ನಾಚುತ್ತ ಒಳಗೆ ಹೊರಟು ಹೋದಳು.

ವಿಜಯಳೂ , ಲಕ್ಷ್ಮಿಯೂ ಅಂಬಿಯ ಹಾಸ್ಯದಲ್ಲಿ ಸೇರಿಕೊಂಡು ನಗಲಾರಂಭಿಸಿದರು. ಐಯ್ಯರು ಹೊಸ ಅಳಿಯನಂತೆ ತಲೆತಗ್ಗಿಸಿಕೊಂಡು ಅಮ್ಮಾವರನ್ನು ಹಿಂಬಾಲಿಸಿದರು.

ವಿಜಯಳೂ, ಲಕ್ಷ್ಮಿಯೂ ಬಂಗಲೆಯ ಸುತ್ತಲೂ ನೋಡಿಬರಲು ಹೊರಟು ಹೋಗಲು, ಅಂಬಿ ಕಾರನ್ನು 'ಷೆಡ್ಡಿ'ನಲ್ಲಿ ಬಿಡಲು ಹೋದನು.

ಆ ಬಳಿಕ, ಎಲ್ಲರೂ ಬಂಗಲೆಯ 'ಹಾಲ'ಲ್ಲಿ ಬಂದು ಕೂಡಿದರು. ಆಗ ಅಡಿಗೆಯ ನಾರಾಯಣ ಅವರಿಗೆಲ್ಲ ದಾಹಶಾಂತಿಗೆಂದು ಕೋಕೋ ಬಂಗಲೆಯ ತೋಟದಲ್ಲಿಯ ಸೇಬು ಹಣ್ಣುಗಳ ಹೋಳುಗಳನ್ನು, ಎಲ್ಲ ತಂದಿಟ್ಟನು. ಫಲಹಾರವಾದ ಬಳಿಕ ವಿಜಯ ಅಂಬಿಯನ್ನು ಕುರಿತು "ಈ ಹೊತ್ತು ತಿರುಗಾಡಲು ಹೋಗಬೇಡವೇ ಅಣ್ಣಾ ?" ಎಂದು ಕೇಳಿದಳು.

ಸರಸ್ವತಿ "ನಾಳೆ ಹೋದರಾಯಿತು. ಇಲ್ಲಿ ಬೆಳಿಗ್ಗೆಯೂ ಸಂಜೆಯೂ ಅಡ್ಡಾಡಲು ಹೋಗುವುದನ್ನು ಬಿಟ್ಟರೆ ಬೇರೆ ಏನು ಕೆಲಸವಿದೆ?"

ಅಂಬಿ "ಯಾಕಮ್ಮಾ? ನಿನಗೆ ಅಷ್ಟರೊಳಗಾಗಿ ಬೇಜಾರು? ಎಷ್ಟು ಮನೋಹರವಾದ ಸ್ಥಳವಿದು! ನನಗಂತೂ ಇಲ್ಲಿ ದಿನವೆಲ್ಲಾ ತಿರುಗಾಡಿದರೂ ಬೇಜಾರಿಲ್ಲ. ಶ್ರಮವೂ ತೋರುವುದಿಲ್ಲ. ಈಗ ಕತ್ತಲಾಗುತ್ತ ಬಂತು. ನಾಳೆ ಬೆಳಿಗ್ಗೆ ಹೋಗೋಣ. ಲಕ್ಷ್ಮೀ. ನಾಳೆ ನಿಮ್ಮಿಬ್ಬರನ್ನೂ ರಮಣೀಯವಾದೊಂದು ಹಾದಿಯಲ್ಲಿ ಕರೆದುಕೊಂಡು ಹೋಗುವೆನು, ನೀನು ಅಲ್ಲಿಯ ಸೊಬಗನ್ನು ಕಂಡುಬಿಟ್ಟರೆ ಅದ್ಭುತವಾದೊಂದು ಗೀತವನ್ನು ರಚಿಸುತ್ತಿ!"

ಮಹಾದೇವನ್ "ಲಕ್ಷ್ಮಿ, ಹೋಗಿ ನಿನ್ನ ತಂಬೂರಿಯನ್ನು ತಂದಿಟ್ಟುಕೊಂಡು, ಎರಡು ಹಾಡು ಹೇಳು, ಯಾಕೋ ಬೇಜಾರಾಗಿದೆ. ವಿಜಯಾ, ನೀನೂ ಲಕ್ಷ್ಮಿಯ ಹತ್ತಿರ ಕಲಿತ ಎರಡು ಹಾಡುಗಳನ್ನು ಹಾಡಬೇಕು, ಗೊತ್ತೆ ?"

ಸರಸ್ವತಮ್ಮ "ತಂಬೂರಿ ಒಳ್ಳೆಯ ಸ್ಥಿತಿಯಲ್ಲಿ ಬಂದಿದೆಯಾ ನೋಡಮ್ಮಾ. ಸಿದ್ದನಿಗೆ ಜಾಗ್ರತೆ, ಜಾಗ್ರತೆಯೆಂದು ಇಪ್ಪತ್ತು ಸಲ ಹೇಳಿದೆ. ಏನುಮಾಡಿರುವನೋ, ನೋಡು" ಎಂದು ಲಕ್ಷ್ಮಿಗೆ ಹೇಳಲು ಲಕ್ಷ್ಮಿ ಎದ್ದು ಹೋಗಿ ಪಕ್ಕದ ಕೊಠಡಿಯಲ್ಲಿ ಇಟ್ಟಿದ್ದ ತಂಬೂರಿಯನ್ನು ತಂದು ರತ್ನಕಂಬಳಿಯಮೇಲಿಟ್ಟು ತಾನೂ ಕುಳಿತಳು. ಅದನ್ನು ಪರೀಕ್ಷಿಸಿ ನೋಡಿ ಸುವ್ಯವಸ್ಥಿತವಾಗಿರಲಾಗಿ, ಶ್ರುತಿಗೂಡಿಸಿಕೊಂಡು ಕರ್ಣಾಮೃತವಾಗಿ ಹಾಡಲುಪಕ್ರಮಿಸಿದಳು. ಆ ಬೆಟ್ಟದ ಪ್ರಕೃತಿ

ಸೌಂದರ್ಯವನ್ನು ಕಂಡು ಆಹ್ಲಾದ ಹೊಂದಿದ್ದ ಆ ಚೆಲುವೆಯ ಮನಸ್ಸು ಹಗುರಗೊಂಡು, ಹೊರಹೊಮ್ಮುವ ಅವಳ ಗಾನ ಅಂದು ಎಂದಿಗಿಂತ ನೂರ್ಮಡಿ ಇಂಪಾಗಿತ್ತು. ಮಿಕ್ಕ ನಾಲ್ವರೂ ಆ ದೇವಗಾನದಲ್ಲಿ ತಲ್ಲೀನರಾಗಿದ್ದರು. ಲಕ್ಷ್ಮಿಯ ಸಂಗೀತ ರಾತ್ರಿ ಎಂಟು ಘಂಟೆಯ ವರೆಗೆ ಜರುಗಿತು. ನಡುವೆ ವಿಜಯಳೂ ಒಂದೆರಡು ಹಾಡು ಹೇಳಿದಳು.

ಅಡಿಗೆಯವನು ಬಂದು ಊಟಕ್ಕೆ ಎಲೆ ಹಾಕಿದೆಯೆಂದು ತಿಳಿಸಿದ ಬಳಿಕವೇ, ಎಲ್ಲರೂ ಊಟಕ್ಕೆ ಎದ್ದರು. ಊಟ ಮುಗಿದ ಬಳಿಕ ಕೊಂಚ ಹೊತ್ತು ಹರಟೆಕೊಚ್ಚಿ ಪ್ರಯಾಣದಿಂದ ಸ್ವಾಭಾವಿಕವಾಗಿ ಏರ್ಪಡುವಂತಹ ಸುಸ್ತಿನಿಂದ ಎಲ್ಲರೂ ಬೇಗನೆ ಮಲಗಿದರು.

ಮರುದಿನ ಬೆಳಗ್ಗೆ ಎಲ್ಲರೂ ಕಾಫೀ ಫಲಾಹಾರವಾದ ಬಳಿಕ, ಮಹಾದೇವನ್‌ರವರೂ ಸರಸ್ವತಮ್ಮನೂ ಒಂದು ಕಡೆಯೂ, ಮಿಕ್ಕ ಮೂವರೂ ಮತ್ತೊಂದು ಕಡೆಯೂ ತಿರುಗಾಡಲು ಹೋದರು.

ಲಕ್ಷ್ಮಿ, ವಿಜಯ, ಅಂಬಿ ಮೂವರೂ ಹೋದ ದಾರಿಯುದ್ದಕ್ಕೂ ದಟ್ಟವಾದ ಮರಗಳೇ. ಅಲ್ಲಿಯ ಪ್ರಕೃತಿ ಸೌಂದರ್ಯಕ್ಕೆ ಮೂವರೂ ಪರಿಪೂರ್ಣವಾಗಿ ಮುಗ್ಧರಾದರೆನ್ನಿ. ವನದ ಮರಗಳಲ್ಲಿ ಸ್ವೇಚ್ಛೆಯಿಂದ ವಾಸಿಸುತ್ತಿರುವ ಪಕ್ಷಿಗಳ ಗುಂಪುಗಳ ಇಂಪಾದ ಗಾನವು, ಮರದಿಂದ ಮರಕ್ಕೆ ಅವು ಹಾರಿ ಹಣ್ಣುಹಂಪಲಗಳನ್ನು ಭಕ್ಷಿಸಿ ತಮ್ಮ ಮಕ್ಕಳಿಗೆ ಕೊಕ್ಕಿನಲ್ಲಿ ಸ್ವಲ್ಪ ತರುತ್ತ ಕೋಲಾಹಲವಾಗಿ ಓಡಿಯಾಡುತ್ತಿರುವ ಅಂದ ಚೆಂದವೂ, ವನದಲ್ಲಿ ಓಡಿ ಅವಿತುಕೊಳ್ಳುವ ಜಿಂಕೆ, ನವಿಲು, ಮೊಲ ಮುಂತಾದ ಮೃಗಪಕ್ಷಿಗಳ ಸುಂದರ ನೋಟವೂ ಲಕ್ಷ್ಮಿಗೆ ಅತ್ಯಾನಂದವನ್ನುಂಟು ಮಾಡಿದವು. ಈ ರೀತಿಯಾಗಿ ಕೊಂಚ ದೂರ ನಡೆದ ಬಳಿಕ ದೊಡ್ಡ ದೊಡ್ಡ ಬಂಡೆಗಳೂ ಅವುಗಳಿಗಾಚೆ ಇದೇ ಪ್ರಪಂಚದ ಅಂತ್ಯವೋ! ಎಂದು ಸಂಶಯ ಬರುವತಂಹ ಭಯಂಕರ ಕೊಳ್ಳವು ಬಂದಿತು.

ದಾರಿಯುದ್ದಕ್ಕೂ ಹಲವು ಎಸ್ಟೇಟುಗಳು. ಒಂದೊಂದು ಎಸ್ಟೇಟಿನಲ್ಲೂ ಒಂದೊಂದು ಸುಂದರ ಭವನ. ಭವನದಿಂದ ಕೊಂಚ ದೂರದಲ್ಲಿ ಎಸ್ಟೇಟಿನಲ್ಲಿ ಕೆಲಸಮಾಡುವ ಕೂಲಿಕಾರರ ಕುಟೀರಗಳು. ಲಕ್ಷ್ಮಿಯೂ ವಿಜಯಳೂ ದಾರಿಯಲ್ಲಿ ಬಿಡಿಸಿ ತಂದ ಪುಷ್ಪಗಳನ್ನು ಕಾಲುವೆಯ ನೀರಲ್ಲಿ

ತೇಲಿ ಬಿಟ್ಟು ತಮಾಷೆಯಾಗಿ ಆಟವಾಡುತ್ತ ಬಂದರು. ಅವರುಗಳು ತಿರುಗಿ ಮನೆ ತಲುಪುವಾಗ ಹಗಲು ಹನ್ನೆರಡು ಘಂಟೆಯ ಸಮಯ. ಐಯ್ಯರೂ ಸರಸ್ವತಮ್ಮನೂ ಅವರುಗಳ ಆಗಮನವನ್ನು ಇದಿರು ನೋಡುತ್ತ ಬಂಗಲೆಯಮುಂದಿನ ಪುಷ್ಪವನದಲ್ಲಿ ಬಿಸಿಲು ಕಾಯುತ್ತ ಅಡ್ಡಾಡುತ್ತಿದ್ದರು.

ಅವರುಗಳ ಆಗಮನವನ್ನು ಕಂಡ ಸರಸ್ವತಮ್ಮ, "ಚೆನ್ನಾಗಿ ಹೋದಿರಿ! ಬಹಳ ಚೆನ್ನಾಗಿದೆ! ಸಮಯ ಸಂದರ್ಭವಿಲ್ಲದೆ ಹೀಗೆ ತಿರುಗಾಡುವುದುಂಟೆ! ಯಾವಾಗ ಸ್ನಾನಮಾಡಿ ಯಾವಾಗ ಊಟ ಮಾಡುವುದು?" ಎಂದು ಕೆನ್ನೆಗೆ ಕೈಯಿಟ್ಟುಕೊಂಡು ಕೇಳಿದಳು.

"ಅಮ್ಮಾ, ಬಿಸಿಲಿನ ತಾಪವೇ ಗೊತ್ತಾಗಲಿಲ್ಲ. ಧಾರಿಯುದ್ದಕ್ಕೂ ರಮಣೀಯವಾದ ನೋಟ. ಕೈಗಡಿಯಾರವನ್ನು ಮನೆಯಲ್ಲಿಯೇ ಮರೆತಿದ್ದುದರಿಂದ ಘಂಟೆ ಇಂತಿಷ್ಟೆಂದೇ ತಿಳಿಯದೇ ಹೋಯಿತು. ಲಕ್ಷ್ಮಿಯಂತೂ ಸ್ನಾನ ಮಾಡಿದುದಾಯಿತು. ನಾನೂ ವಿಜಯಳೂ ಮೊದಲು ಊಟಮಾಡಿ, ಬಳಿಕ ನಿಧಾನವಾಗಿ ಸ್ನಾನ ಮಾಡುತ್ತೇವೆ" ಎಂದನು ಅಂಬಿ.

ಸರಸ್ವತಮ್ಮ, "ನಮ್ಮ ಮನೆಯಲ್ಲಿ ಹೊತ್ತು ಹೊತ್ತಿಗೆ ಸ್ನಾನ ಮಾಡುವ ಅಭ್ಯಾಸವೇ ಇಲ್ಲವಲ್ಲಾ! ಹಾಸಿಗೆಯಿಂದ ಏಳುವಾಗಲೇ ಎಂಟು ಘಂಟೆ ಆಗಿಹೋಗುತ್ತೆ. ಆ ಮೇಲೆ ಮುಖ ತೊಳೆದು ಒಂದು ಲೋಟ ಕಾಫೀ ಕುಡಿದು ಹರಟೇ ಕೊಚ್ಚುವುದರೊಳಗಾಗಿ ಹತ್ತು ಘಂಟೆ ಹೊಡೆಯುತ್ತೆ. ಕೊನೆಗೆ ಊಟದ ಸಮಯದಲ್ಲೋ, ಅಥವಾ ಸಾಯಂಕಾಲವೋ ಸ್ನಾನ" ಎಂದಂದು ಐಯ್ಯರನ್ನು ಕುರಿತು "ಏನೂಂದ್ರೆ ಇವತ್ತು ನೋಡಿ. ಏನಾಶ್ಚರ್ಯ! ನಾನು ಹಾಸಿಗೆಯಿಂದ ಎದ್ದು ಬರುವಾಗಲೇ ಲಕ್ಷ್ಮಿ ಸ್ನಾನ ಮುಗಿಸಿಕೊಂಡು ತೋಟದಿಂದ ಹೂ ಬಿಡಿಸಿ, ತಂದು ಹಾರ ಕಟ್ಟಿ ದೇವರ ಪಟಗಳಿಗೆ ಹಾಕುತ್ತಿದ್ದಳು. ನನಗೆ ಬಹಳ ಆಶ್ಚರ್ಯವಾಯಿತು. ಏನೇ ಇದು, ಲಕ್ಷ್ಮೀ! ನಿದ್ರೆ ಬರಲಿಲ್ಲ ವೇನು? ಇಷ್ಟೊಂದು ಬೇಗ ಎಚ್ಚೆತ್ತಿರುವೆ? ಸ್ನಾನ ಸಹ ಮಾಡಿ ಬಿಟ್ಟಿರುವೆಯಲ್ಲಾ, ಈ ಛಳಿಯಲ್ಲಿ! ಮೈಗೆ ಒಗ್ಗದಿದ್ದರೆ? ಎಂದು ಖಂಡಿಸಿದೆ. 'ನಾನು ಪ್ರತಿನಿತ್ಯ ಇಷ್ಟು ಹೊತ್ತಿಗೇ ಸ್ನಾನಮಾಡುವ

ಮಾಡಿಕೆ ಮಾಮೀ” ಎಂದಳು ಲಕ್ಷ್ಮಿ. ನಮ್ಮ ಮನೆಯ ಮಕ್ಕಳ ಸಂಗಡ ಸೇರಿ, ಅವಳೂ ಸೋಮಾರಿಯಾಗುತ್ತಾಳಷ್ಟೆ, ಇದೇ ನನಗೀಗ ಚಿಂತೆ” ಎಂದಳು ಸರಸ್ವತಮ್ಮ.

ಅಂಬಿ “ಸಾಕಮ್ಮಾ ನಿನ್ನ ಉಪನ್ಯಾಸ! ಹೊಟ್ಟೆ ತಾಳಹಾಕುತ್ತಿದೆ. ಮೊದಲು ಊಟಮಾಡೋಣಬಾ.” ಎಂದು ಕರೆಯಲು, ಎಲ್ಲರೂ ಬಂಗಲೆಯೊಳಗೆ ಹೋದರು.

## ೧೦

ಮಹಾದೇವನ್ ಕುಟುಂಬದವರು ಉಲ್ಲಾಸವಾಗಿ ಹದಿನೈದು ದಿನಗಳು ಎರ್ಕಾಡಿನಲ್ಲಿ ಕಳೆದರು. ಬೆಟ್ಟದ ಪ್ರದೇಶದಲ್ಲಿ ಬೆಳಗು ಸಂಜೆಗಳಲ್ಲಿ ಹಲಕೆಲವು ರಮಣೀಯ ಸ್ಥಳಗಳಿಗೆ ಭೇಟಿ ಕೊಡುವುದರಲ್ಲಿಯೂ ಆನಂದವಾಗಿ ಹರಟೆಹೊಡೆಯುವುದರಲ್ಲೂ, ಸಂಭ್ರಮವಾಗಿ ಊಟಮಾಡುವುದರಲ್ಲೂ ಕಾಲಕಳೆದರು. ಒಂದು ದಿನ ಸಂಜೆ ಎಲ್ಲರೂ ಟೀ ಕುಡಿದ ಬಳಿಕ ನಡುಮನೆಯಲ್ಲಿ ಕುಳಿತು ರೇಡಿಯೋ ಕೇಳುತ್ತಿದ್ದರು. ಆಗ ವಿಜಯಳೂ ಲಕ್ಷ್ಮಿಯೂ ಜಡೆ ಹೆಣೆದುಕೊಂಡು, ಹೂ ಬಿಡಿಸಲು ತೋಟಕ್ಕೆ ಹೋದರು. ಸಂಧ್ಯಾ ಕಾಲವು ಅತ್ಯಂತ ಮನೋಹರವಾಗಿತ್ತು. ಬೆಟ್ಟದಿಂದ ಕೆಳಭಾಗವನ್ನೂ ನೋಡಿದಲ್ಲಿ ಕೆರೆಗಳೂ, ಹಳ್ಳಕೊಳ್ಳಗಳೂ ಸಂಜೆಯ ಬಿಸಿಲಲ್ಲಿ ಚಿನ್ನದ ರೇಖೆಗಳಂತೆ ಥಳಥಳಿಸುತ್ತಿದ್ದವು. ತೋಟದಲ್ಲಿ ಜಾಜಿ, ಮಲ್ಲಿಗೆ, ಗುಲಾಬಿ, ಸೇವಂತಿ ಮುಂತಾದ ಪುಷ್ಪಗಿಡಗಳು ಸಂಪೂರ್ಣ ಪುಷ್ಪಿಸಿ ಕಳಕಳಿಸುತ್ತಿದ್ದವು. ಸುಗಂಧಮಯ ವಾತಾವರಣದಲ್ಲಿ ಮಂಪಗಮನೆಯರಿಬ್ಬರೂ ವನದೇವತೆಗಳಂತೆ ಉಲ್ಲಾಸದಿಂದ ಪುಷ್ಪಗಳನ್ನು ಕೊಯ್ದು ತಂದು ಆ ವನದಲ್ಲಿದ್ದ ಕಲ್ಲು ಬೆಂಚೊಂದರ ಮೇಲೆ ಕುಳಿತು ಹೂ ಕಟ್ಟತೊಡಗಿದರು.

ವಿಜಯಳಿಗೆ ಹೂ ಕಟ್ಟಲು ಬಾರದು. ಲಕ್ಷ್ಮಿ ಬಗೆಬಗೆಯ ರೀತಿಯಲ್ಲಿ ಅಂದಚಂದವಾಗಿ ಹೂಕಟ್ಟುವದನ್ನು ಕಂಡು ವಿಜಯಳು ಲಕ್ಷ್ಮಿಯ ಹತ್ತಿರ ಹೂಕಟ್ಟುವುದನ್ನು ತಾನೇ ಕಲಿಯಲು ಪ್ರಾರಂಭಿಸಿದಳು. ಇಬ್ಬರೂ ಮಾತನಾಡುತ್ತಿರುವಾಗಲೇ ಲಕ್ಷ್ಮಿ ಸುಂದರವಾದ ಮೂರು ವೇಣಿಗಳನ್ನು

ತಯಾರಿಸಿಬಿಟ್ಟಳು. ಆ ದಿನ ಶುಕ್ರವಾರವಾದುದರಿಂದ ಬಂಗಲೆಯ ನಡು ಮನೆಯಲ್ಲಿ ತೂಗುಹಾಕಿದ್ದ ಲಕ್ಷ್ಮೀದೇವಿಯ ದೊಡ್ಡ ಪಟಕ್ಕೆಂದು ವಿವಿಧ ಬಣ್ಣದ ಪುಷ್ಪಗಳಿಂದಲೂ ವರ್ಣವೈವಿಧ್ಯತೆಯಿಂದಲೂ ಕೂಡಿದ ಅತಿ ಮನೋಹರವಾದೊಂದು ಪುಷ್ಪಮಾಲಿಕೆಯನ್ನು ತಯಾರಿಸಿದಳು ಲಕ್ಷ್ಮಿ. ವಿಜಯಳಂತೂ ಅಷ್ಟು ಹೊತ್ತಿನಿಂದ ಮೂರಂಗುಲದಷ್ಟು ಹೂಕಟ್ಟಿರಲಿಲ್ಲ. ಅವಳು ಹೂಕಟ್ಟುವ ಗಮನದಲ್ಲೂ, ಮಾತಿನ ಭರದಲ್ಲೂ ಲಕ್ಷ್ಮೀ ತಯಾರಿಸುತ್ತಿದ್ದ ಕದಂಬ ಹಾರವನ್ನು ಮೊದಲು ನೋಡಿರಲಿಲ್ಲ. ಲಕ್ಷ್ಮಿಯ ಕೈಯಲ್ಲಿ ಪೂರ್ತಿಯಾಗಿ ಬೆಳಗುತ್ತಿದ್ದ ಹಾರವನ್ನು ಕಂಡು ವಿಜಯ ಬೆರಗಾಗಿ "ಲಕ್ಷ್ಮೀ, ಎಂತಹ ಅದ್ಭುತವಾದ ಹಾರವನ್ನು ಕಟ್ಟಿದ್ದೀ! ವರ್ಣ ಜೋಡಣೆಯೊಂದೇ ಸಾಕು! ಕಣ್ಣು ಕುಕ್ಕುತ್ತಿದೆ!!" ಎಂದೆಂದು ಎವೆಯಿಕ್ಕದೆ ನೋಡುತ್ತಿದ್ದಳು. ಅದೇ ಸಮಯ "ಅದೇನನ್ನು ಅಷ್ಟೊಂದು ಹೊಗಳುತ್ತಿರುವಿ ವಿಜಯ ? ತಿರುಗಾಡಲು ಬರುವುದಿಲ್ಲವೇನು ?" ಎಂದನ್ನುತ್ತ ಅಲ್ಲಿಗೆ ಅಂಬಿ ಬಂದ.

ವಿಜಯ "ಅಣ್ಣಾ, ಈ ಹಾರವನ್ನು ನೋಡು ! ಲಕ್ಷ್ಮಿ, ಲಕ್ಷ್ಮೀದೇವಿಯ ಪಟಕ್ಕೆಂದು ಎಷ್ಟು ಅಂದವಾಗಿ ಕಟ್ಟಿರುವಳು ! ಇದನ್ನು ಕಟ್ಟಿದ ಕೈಗೆ ವಜ್ರದ ಬಳೆ ಬಹುಮಾನ ಕೊಟ್ಟರೂ ಸಾಲದು ! ಅಲ್ಲವೇ ಅಣ್ಣಾ ? "

ಅಂಬಿ "ಲಕ್ಷ್ಮಿ, ಹಾರವನ್ನು ಇಲ್ಲಿ ಕೊಡು ನೋಡೋಣ" ಎಂದನು. ಲಕ್ಷ್ಮಿ ಅವನ ಕೈಯಲ್ಲಿ ಪುಷ್ಪಹಾರವನ್ನಿತ್ತಳು. ಅದನ್ನು ಆ ತರುಣ ತಿರುವಿ ತಿರುವಿ ನೋಡಿ ಆನಂದಿಸಿದ. ಅದನ್ನು ನೋಡುತ್ತಲೂ ಹಠಾತ್ತನೆ ಅವನಿಗೊಂದು ಯೋಚನೆ ಹೊಳೆಯಿತು. 'ಲಕ್ಷ್ಮಿ ಪಟಕ್ಕೆಂದಲ್ಲವೇ ಇದನ್ನು ಕಟ್ಟಿದೆ? ಇಗೋ ಲಕ್ಷ್ಮಿಗೇ ಹಾಕುತ್ತೇನೆ " ಎಂದೆಂದು ಆದನ್ನು ಕೂಡಲೇ ಲಕ್ಷ್ಮಿಯ ಕೊರಳಿಗೆ ಹಾಕಿಬಿಟ್ಟನು.

ಆ ಕೂಡಲೇ ವಿಜಯ ಚಪ್ಪಾಳೆ ಹೊಡೆಯುತ್ತ ನಕ್ಕು "ಅಣ್ಣಾ, ಒಳ್ಳೆಯ ಕೆಲಸ ಮಾಡಿದೆ ! ನನಗೂ ಲಕ್ಷ್ಮಿಯಂತಹ ಅತ್ತಿಗೆ ಬೇಕೆಂದೇ ಆಸೆಯಿತ್ತು. ಈಗ ಲಕ್ಷ್ಮಿಯೇ ಅತ್ತಿಗೆಯಾದಳು! ಅಣ್ಣಾ, ಬಹಳ

ಭೇಷ್! ಲಕ್ಷ್ಮೀ, ಹಾರವನ್ನು ತೆಗೆದು ಮರಳಿ ಅಣ್ಣನ ಕೊರಳಲ್ಲಿ ಹಾಕಿಬಿಡು!" ಎಂದು ಪರಿಹಾಸ್ಯ ಮಾಡಿದಳು.

ಲಕ್ಷ್ಮಿಗೆ ನಾಚಿಕೆಯೊಂದುಕಡೆ, ದುಃಖ ಒಂದುಕಡೆ, ಉಕ್ಕಿಬಂದವು. ಅವಳ ಬಾಯಿಂದ ಮಾತು ಹೊರಡದಾಯಿತು. ಕೊರಳಲ್ಲಿದ್ದ ಹಾರವನ್ನು ತೆಗೆದು ಪಕ್ಕದಲ್ಲಿದ್ದ ಬುಟ್ಟಿಯಲ್ಲಿಟ್ಟು, ಅಲ್ಲಿಂದ ಒಂದೇಸವನೆ ಓಡಿ ಹೋದಳು. ಆಗ ತಾನೇ, ತಾನು ಮಾಡಬಾರದ ಕೆಲಸವನ್ನು ಮಾಡಿದೆನೆಂಬ ಪರಿಜ್ಞಾನ ಹೊಳೆಯಿತು ಅಂಬಿಗೆ. ಇವನ ಮುಖದಲ್ಲೊಂದು ಹುಚ್ಚು ನಗೆ ತೋರಿ ಮಾಯವಾಯಿತು. ವಿಜಯಳನ್ನು ಕುರಿತು "ಹೋಗೇ ಹುಚ್ಚಿ! ನಾನು ಸುಮ್ಮನೆ ತಮಾಷೆಗೆ ಆ ರೀತಿ ಮಾಡಿದರೆ ನೀನೂ ಸೇರಿಕೊಂಡು ಏನೇನೋ ಪರಿಹಾಸ್ಯ ಮಾಡಿದಿ! ಲಕ್ಷ್ಮಿ ಏನೆಂದು ಕೊಂಡಳೋ ಏನೋ? ಪಾಪ, ಹೋಗಿ ನೋಡೆ" ಎಂದನು.

ವಿಜಯಳೂ ಸಹ ವ್ಯತ್ಯಾಸವಾಗಿ ಯೋಚಿಸುತ್ತ ಏನನ್ನೂ ಅನ್ನಲಿಲ್ಲ. ಸುಮ್ಮನೆ, ಹುಡುಗಾಟಕ್ಕಾಗಿ ಅಂದಳಷ್ಟೆ. ಆದರೆ ಲಕ್ಷ್ಮಿಯ ಮುಖಭಾವನೆಯನ್ನು ಕಂಡಮೇಲೆ ತಾನು ಆಡಿದ ಮಾತುಗಳ ತಪ್ಪನ್ನು ತಿಳಿದಳು. ಆದರೂ ಕೂಡ ಅಂಬಿ ತನ್ನ ಮೇಲೆ ದೋಷಾರೋಪಣೆ ಮಾಡುವದನ್ನು ಸಹಿಸಲಿಲ್ಲ. ಆದುದರಿಂದ ಅವಳು "ನೀನು ಮಾಡಿದ ತಮಾಷೆ ಪರವಾಗಿಲ್ಲವೋ? ನಾನೂ ತಮಾಷೆ ಮಾಡಿದೆನಷ್ಟೆ. ನೀನೇ ಬೇಕಾದರೆ ಹೋಗಿ ಅವಳಿಗೆ ಸಮಾಧಾನ ಹೇಳು" ಎಂದಳು. ಅಷ್ಟರೊಳಗಾಗಿ ಅವರುಗಳ ತಾಯಿತಂದೆಯರು ಅಲ್ಲಿಗೆ ಬರುವುದನ್ನು ಕಂಡು ಇಬ್ಬರೂ ಸುಮ್ಮನಾದರು.

ಬಂಗಲೆಯೊಳಗೆ ಹೋದ ಲಕ್ಷ್ಮಿ ನೆಟ್ಟಗೆ ತನ್ನ ಮಲಗುವ ಮನೆಗೆ ಹೋಗಿ ಬಾಗಿಲು ಹಾಕಿಕೊಂಡು, ಮಂಚದ ಮೇಲೆ ಕುಳಿತಳು. ಹೃದಯ ಹಗುರಾಗುವಷ್ಟು ಬಿಕ್ಕಿಬಿಕ್ಕಿ ಅತ್ತಳು. ಅಂಬಿ, ಪರಮ ದರಿದ್ರಳಾದ ತನ್ನನ್ನು ವಿವಾಹವಾಗಲು ಸಮ್ಮತಿಸಲಾರನೆಂದೂ, ತಾನೊಬ್ಬ ಅನಾಥ ಹುಡುಗಿಯೆಂದೇ ತನ್ನನ್ನು ಅಪಮಾನಗೊಳಿಸಲು ಆ ರೀತಿ ಮಾಡಿದನೆಂದೂ ಪರಿಪರಿಯಾಗಿ ನೆನೆದು, ಕೊರಗಿದಳು. ತಾನೂ ತನ್ನ ತಾಯಿಯೂ ಈ ಕುಟುಂಬದವರೊಡನೆ ಇಷ್ಟೊಂದು ಸ್ನೇಹ ಬೆಳೆಸಿಕೊಂಡಿರಬಾರದಾಗಿ

ತ್ತೆಂದು ಮನನೊಂದಳು. ಅಂಬಿ ನಿಜವಾಗಿಯೂ ತನ್ನನ್ನು ಪ್ರೀತಿಸಿದ್ದರೆ ತನ್ನ ಸಮ್ಮತಿ ಕೇಳದೆ ಈ ರೀತಿ ಅದೂ ವಿಜಯಳ ಇದಿರಿಗೆ ಎಂದಿಗೂ ಮಾಡಿರಲಾರನೆಂದೂ, ತನ್ನನ್ನು ಅಪಮಾನಗೊಳಿಸಲೆಂದೇ ಆ ರೀತಿ ಮಾಡಿರಬೇಕೆಂಬ ತೀರ್ಮಾನಕ್ಕೆ ಬಂದಳು.

ತೋಟದಲ್ಲಿದ್ದವರು ಬಂಗಲೆಯೊಳಗೆ ಬರುವ ಸದ್ದು ಕೇಳಿ, ಲಕ್ಷ್ಮಿ ಎದ್ದು ಬಚ್ಚಲಮನೆಗೆ ಹೋಗಿ ಮುಖ ತೊಳೆದುಕೊಂಡಳು. ಹೊಸದಾಗಿ ಕುಂಕುಮ ಧರಿಸಿ ಕೆದರಿದ ತಲೆ ಬಾಚಿಕೊಂಡು ನಡುಮನೆಗೆ ಬಂದಳು.

ಅದೇ ಸಮಯ ಮಿಕ್ಕವರೂ ನಡುಮನೆಯನ್ನು ಪ್ರವೇಶಿಸಲು, ಸರಸ್ವತಮ್ಮ " ಲಕ್ಷ್ಮೀ, ಇಷ್ಟು ಹೊತ್ತು ನಿನ್ನನ್ನು ಕಾಣಲೇಯಿಲ್ಲವಲ್ಲಾ? ಯಾಕೆ ಕಣ್ಣು ಕೆಂಪಾಗಿದೆ? ಮೈ ಚೆನ್ನಾಗಿಲ್ಲವೇ? ವಿಜಯಳನ್ನು ಕೇಳಿದೆ. ನೀರು ಕುಡಿಯಲು ಹೋಗಿದ್ದಾಳೆಯೆಂದಳಲ್ಲಾ?" ಎಂದು ಪ್ರಶ್ನೆಗಳ ಮಳೆಸುರಿಸಿದಳು.

ಲಕ್ಷ್ಮಿ ನಮ್ರತೆಯಿಂದ, " ನೀರು ಕುಡಿಯಲೆಂದೇ ಒಳಗೆ ಬಂದೆ. ಮಧ್ಯಾಹ್ನದಿಂದ ಕೊಂಚ ತಲೆನೋವಾಗಿತ್ತು. ಈಗ ವಿಪರೀತವಾಗಿ ಬಿಟ್ಟಿದೆ. ಆದುದರಿಂದಲೇ ಕಣ್ಣು ಕೆಂಪಗಾಗಿರಬೇಕು" ಎಂದಳು.

ಮಹಾದೇವನ್, "ಲಕ್ಷ್ಮೀ, ಎಷ್ಟೊಂದು ಸುಂದರ ಹಾರ ಕಟ್ಟಿರುವೆಯಲ್ಲಾ!! ಭೇಷ್! ಇದರ ಹಿಂದೆ ಇಂತಹ ಸುಂದರ ಹಾರವನ್ನು ನಾನು ನೋಡಿಯೇ ಇರಲಿಲ್ಲ! ಸರಸೂ ಕೊಂಚ ಅಮೃತಾಂಜನವನ್ನಾದರೂ ತಂದು ಅವಳ ಹಣೆಗೆ ಸವರಬಾರದೇ?" ಎಂದರು.

ಲಕ್ಷ್ಮಿ ನಾಚುತ್ತ "ಅದೆಲ್ಲ ಬೇಡ ಮಾಮಾ. ಸ್ವಲ್ಪ ಹೊತ್ತಿನಲ್ಲಿ ಎಲ್ಲ ಸರಿಯಾಗುತ್ತೆ" ಎಂದಳು.

ಸರಸ್ವತಮ್ಮ "ಹಾಗಾದರೆ ನಾನೂ ಲಕ್ಷ್ಮಿ ಮನೆಯಲ್ಲೇ ಇರುತ್ತೇವೆ. ನೀವೆಲ್ಲಾ ತಿರುಗಾಡಿಕೊಂಡು ಬನ್ನಿ" ಎನಲು, ಮಿಕ್ಕ ಮೂವ್ವರೂ ಅಡ್ಡಾಡಲು ಹೊರಟು ಹೋದರು.

ಆ ಹೊತ್ತು ರಾತ್ರಿ ಪೂರ್ತಿ ಲಕ್ಷ್ಮಿಗೆ ನಿದ್ರೆಯೇ ಹತ್ತಲಿಲ್ಲ. ಸಂಜೆ ಜರುಗಿದ ಸಂಭವದ ವಿಷಯವಾಗಿಯೇ ನೆನೆನೆನೆದು ಮರುಗುತ್ತಿದ್ದಳು. ಸಿಗಲಾರದ ಹಣ್ಣಿಗೆ ಹಂಬಲಿಸುವಂತೆ, ತನ್ನ ಜಾತಕದಲ್ಲಿ ಇಷ್ಟು ದೊಡ್ಡ

ಮನುಷ್ಯರ ಮನೆಗೆ ಸೊಸೆಯಾಗಿ ಬರುವ ಪುಣ್ಯ ಬಾರದಿದ್ದರೂ, ತನ್ನ ಖಾಸಾ ಅಣ್ಣನಂತೆ ಭಾವಿಸಿಕೊಂಡಿದ್ದ ಅಂಬಿ ತನ್ನನ್ನು ಈ ರೀತಿ ಮಾಲೆ ಹಾಕಿ ಅಪಮಾನ ಮಾಡಿದನಲ್ಲಾ ಎಂದು ವಿಪರೀತ ನೊಂದುಕೊಂಡಳು. ಬಹುಶಃ ಅಂಬಿ ತನ್ನ ಮೇಲಿನ ಪ್ರೇಮದಿಂದಲೇ ಆ ರೀತಿ ಹಾರ ಹಾಕಿರ ಬಹುದೋ ಎಂಬ ಶಂಕೆ ಎದ್ದಿತವಳಿಗೆ. ಆದರೆ ಅವನನ್ನು ಹೆತ್ತವರು ಈ ವಿವಾಹಕ್ಕೆ ಎಂದಿಗೂ ಸಮ್ಮತಿಸಲಾರರೆಂಬ ನೆನಪೂ ಜೊತೆಯಲ್ಲೇ ಅವಳನ್ನು ಪೀಡಿಸಿತು.

ಇದೇ ರೀತಿಯಲ್ಲಿ ಅಂಬಿಯೂ ಸಹ ರಾತ್ರಿಯೆಲ್ಲ ಹುಚ್ಚು ಹಿಡಿದವ ನಂತೆ ಏನೇನೋ ಯೋಚಿಸುತ್ತ ಮಲಗಿದ್ದನು. ಸಂಜೆ ತಾನು ಮಾಡಿದ ತಪ್ಪಿಗಾಗಿ ಮನನೊಂದನು. ಅದೇ ಸಂಜೆ ಒಂದೆರಡು ಸಲ ಲಕ್ಷ್ಮಿಯ ಸಂಗಡ ಮಾತನಾಡಿ ಕ್ಷಮೆ ಬೇಡಬೇಕೆಂದು ಪ ಯತ್ನಿಸಿದನು. ಆದರೆ, ಲಕ್ಷ್ಮಿ ಒಂಟಿಯಾಗಿ ಸಿಗುವ ಸಂದರ್ಭವೇ ಒದಗಲಿಲ್ಲ. ತಾನು ಅವಳನ್ನು ಹೊರತಾಗಿ ಇನ್ನು ಯಾರನ್ನೂ ಮದುವೆಯಾಗುವುದಿಲ್ಲವೆಂದೂ, ತಾನು ಅವಳನ್ನು ನೋಡಿದಂದಿನಿಂದ ಅವಳನ್ನು ಅತಿಯಾಗಿ ಪ್ರೀತಿಸುತ್ತಿರುವು ದನ್ನೂ, ಆ ಸಂಜೆಯ ಸೊಬಗಿನಲ್ಲಿ, ಆ ರಮಣೀಯವಾದ ಪುಷ್ಪವನದಲ್ಲಿ, ಅವಳ ಸೌಂದರ್ಯದ ರಾಶಿಯನ್ನು ಕಂಡು ಬೆರಗಾಗಿ ಹುಚ್ಚನಾದೆನೆಂದೂ, ತನ್ನನ್ನು ತನ್ನ ತಿಳಿಗೇಡಿತನಕ್ಕಾಗಿ ಕ್ಷಮಿಸಬೇಕೆಂದೂ ಅವಳ ಹತ್ತಿರ ಕ್ಷಮಾಭಿಕ್ಷೆ ಕೇಳಬೇಕೆಂದು ತೀರ್ಮಾನಿಸಿದನು. ಮುಂಜಾನೆ, ಎಲ್ಲರಿಗಿಂತಲೂ ಮುಂಚಿತವಾಗಿ ಎದ್ದು, ಸ್ನಾನಮಾಡಿ, ತೋಟದಿಂದ ಹೂ ಕೊಯ್ದು ತರುವುದು ಲಕ್ಷ್ಮಿಯ ವಾಡಿಕೆಯಾದುದರಿಂದ, ಅವಳನ್ನು ಏಕಾಂತದಲ್ಲಿ ಸಂಧಿಸಲು ಅದೇ ತಕ್ಕ ಸಮಯವೆಂದು ನಿಶ್ಚಯಿಸಿಕೊಂಡನು. ಅದೇ ರೀತಿಯಲ್ಲಿ ಬೆಳಕು ಹರಿಯುವುದರೊಳಗಾಗಿಯೇ ಹಾಸಿಗೆಯಿಂದ ಎದ್ದು ಬೇಗನೇ ಮುಖ ತೊಳೆದು ಹೂದೋಟದೊಳಗೆ ಬಂದು ಲಕ್ಷ್ಮಿಗಾಗಿ ಕಾದಿದ್ದನು.

ಲಕ್ಷ್ಮಿಯು ಎಂದಿನಂತೆ ಕೈಯಲ್ಲೊಂದು ಪುಷ್ಪದ ಪುಟ್ಟಿಗೆಯ ಸಹಿತ ದೇವಕನ್ನಿಕೆಯಂತೆ ಪ್ರಸನ್ನಳಾದಳು. ಆ ಹೊತ್ತು ಅವಳು ಉಟ್ಟಿದ್ದ ಕನಕಾಂಬರ ಬಣ್ಣದ ಸೀರೆ ಅವಳಿಗೆ ಬಹಳ ಚೆನ್ನಾಗಿ ಒಪ್ಪುತ್ತಿತ್ತು.

ರಂಭೆಯೋ, ಊರ್ವಶಿಯೋ, ತಿಲೋತ್ತಮೆಯೋ ಎಂದು ಸಂಶಯಗೊಳ್ಳು ವಂತಹ ಚೆಲುವಿನಿಂದ ತನ್ನೆದುರಿಗೆ ಪ್ರಸನ್ನಳಾದ ಕನ್ಯೆಯನ್ನುಎವೆಯಿಕ್ಕದೆ ನೋಡುತ್ತ ನಿಂತಿದ್ದನು ಅಂಬಿ. ಬಳಿಕ ಲಕ್ಷ್ಮಿಯನ್ನು ಸಮೀಪಿಸಿ, " ಲಕ್ಷ್ಮಿ ನನ್ನನ್ನು ಕ್ಷಮಿಸೋಲ್ಲವೇ ? ಎಂದು ಪ್ರೇಮಪೂರಿತವಾಗಿ ಕೇಳುತ್ತ ಅವಳ ಕೈಯನ್ನು ಹಿಡಿದುಕೊಂಡನು. ಅವಳು ಬೆಚ್ಚಿಬಿದ್ದು, ಅವನನ್ನು ಒಂದು ಸಲ ಈಕ್ಷಿಸಿ ಮತ್ತೆ ತಲೆತಗ್ಗಿಸಿಕೊಂಡಳು. ಆ ಸಮಯ ಏನು ಮಾಡಲೂ ತೋಚದವಳಾಗಿ ನಿಂತಳು. ದುಃಖ ಒಂದೇಸವನೆ ಉಕ್ಕಿಬಂದು ಗಂಟಲು ಬಿಗಿಯಿತು. ಅವಳ ವಿಶಾಲ ನೇತ್ರಗಳಲ್ಲಿ ಕಣ್ಣೀರ ಹನಿಗಳು ಕಾಣಿಸಿಕೊಂಡವು. ಇಬ್ಬರೂ ಕೆಲ ನಿಮಿಷಗಳ ಕಾಲ ಮೌನದಿಂದ ನಿಂತಲ್ಲಿಯೇ ನಿಂತಿದ್ದರು. ಲಕ್ಷ್ಮಿಯ ಕಣ್ಣುಗಳಲ್ಲಿ ಹರಿದ ಕಣ್ಣೀರು ಅವಳ ಕೋಮಲ ಕೈಯನ್ನು ಹಿಡಿದಿದ್ದ ಅಂಬಿಯ ಕೈಮೇಲೆ ಬಿದ್ದವು.

ಅಂಬಿ ಪುನಃ ಪರಿತಾಪಕರವಾಗಿ, " ಲಕ್ಷ್ಮೀ ನನ್ನ ಚಿನ್ನಾ ! ಅಳಬಾರದು. ನಿನ್ನಿಂದ ಇದೊಂದು ಸಲ ಕ್ಷಮೆ ಬೇಡುತ್ತೇನೆ. ನಾನು ಮಾಡಿದ್ದು ಮಹಾಪರಾಧ. ಆ ಸಂಧ್ಯಾ ಕಾಲದ ಎಳೆಬಿಸಿಲಲ್ಲಿ ನೀನು ಅತ್ಯಂತ ಸುಂದರವಾಗಿ ತೋರಿದೆ ! ನಿನ್ನನ್ನು ಇಷ್ಟೊಂದು ಕಾಲ ಅತಿಯಾಗಿ ಪ್ರೀತಿಸುತ್ತಿದ್ದ ನಾನು ಆ ಸಮಯದ ಅರಿವಿಲ್ಲದೆಯೇ ಆ ರೀತಿ ಮಾಡಿಬಿಟ್ಟೆ " ಎಂದು ದೈನ್ಯದಿಂದ ಬೇಡಿಕೊಂಡನು.

ಲಕ್ಷ್ಮಿ ಅವನ ಕಡೆ ಮುಖವೆತ್ತಿ ನೋಡುತ್ತ ದೈನ್ಯದಿಂದ ನೀವಂತೂ ನನ್ನನ್ನು ಅಪಮಾನಗೊಳಿಸಿದುದಾಯಿತು. ನೀವು ಒಬ್ಬ ಶ್ರೀಮಂತರು ನಾನೊಬ್ಬ ಬಡ ಹುಡುಗಿ " ಎಂದು ಅಷ್ಟಕ್ಕೇ ಮಾತು ನಿಲ್ಲಿಸಿದಳು. ಅಷ್ಟರ ಮೇಲೆ ಅವಳ ಬಾಯಿಂದ ಮಾತು ಹೊರಡದಾಯಿತು.

ಅಂಬಿ, " ನನ್ನನ್ನು ನೀಚನೆಂದೂ, ಪಶುವೆಂದೂ ತಿಳಿದೆಯೇನು ? ಎಂತಹ ಎಡರುತೊಡರುಗಳು ಏರ್ಪಟ್ಟರೂ ಕೂಡ ನಿನ್ನ ಹೊರತಾಗಿ ಇನ್ನಾರನ್ನೂ ನಾನು ವಿವಾಹವಾಗಲಾರೆ, ಇದು ಸತ್ಯ. ನನ್ನನ್ನು ನಿಜ ವಾಗಿಯೂ ನಂಬು ಲಕ್ಷ್ಮಿ " ಎಂದು ಅಂಗಲಾಚಿ ಬೇಡಿದ. ಅವನ ಮೆಲು ದನಿಯನ್ನು ಕೇಳುತ್ತ ಕೇಳುತ್ತ ಲಕ್ಷ್ಮಿಗೆ ರೋಮಾಂಚವಾಯಿತು. ಅವಳ ಕರವನ್ನೆತ್ತಿ ಅದರ ಮೇಲೊಂದು ಪ್ರೇಮಮುದ್ರೆಯನ್ನಿಟ್ಟ.

ಅಷ್ಟರ ಮೇಲೆ ಅಲ್ಲಿ ನಿಲ್ಲಲಾರದೆ, ಲಕ್ಷ್ಮಿ ಸಂಕೋಚದಿಂದ ಬಂಗಲೆಯೊಳಗೆ ಓಡಿಬಿಟ್ಟಳು. ಲಕ್ಷ್ಮಿಯು ಮನೋಭಾವನೆಯನ್ನರಿತ ಅಂಬಿಯ ಮನವು ಆನಂದಭರಿತವಾಯಿತು.

ಅಂಬಿ, ವಿಲಾಯಿತಿಗೆ ತೆರಳುವ ದಿನ ಬಹಳ ಸಮೀಪಿಸಲು, ಅವನಿಗೆ ಬೇಕಾದ ಬಟ್ಟೆಗಳನ್ನು ಹೊಲಿಸುವುದಕ್ಕೂ, ಮತ್ತೆ ಕೆಲವು ಸಾಮಾನುಗಳನ್ನು ಒದಗಿಸಿಕೊಳ್ಳುವುದಕ್ಕೂ ಸಾಕಷ್ಟು ಅವಕಾಶ ಬೇಕಿತ್ತು. ಆದುದರಿಂದ ಎಲ್ಲರೂ ಸೇಲಂಗೆ ಹಿಂದಿರುಗಬೇಕಾಯಿತು.

೧೧

ಒಂದು ದಿನ ಮಧ್ಯಾಹ್ನ ಊಟವಾದ ಬಳಿಕ ಅಂಬಿ ನಡುಮನೆಯಲ್ಲಿ ಕುಳಿತು ಶೇರ್ವರಾಯ ಬೆಟ್ಟದಲ್ಲಿ ತೆಗೆದಿದ್ದ ಫೋಟೋಗಳ ಪ್ರತಿಗಳನ್ನು (Snap-shots) ಒಂದು 'ಆಲ್ಬಂ'ನಲ್ಲಿ ಅಂಟಿಸುತ್ತಲಿದ್ದನು. ವಿಜಯ ಆ ಕೆಲಸದಲ್ಲಿ ಅವನಿಗೆ ನೆರವಾಗಿದ್ದಳು. ಸರಸ್ವತಮ್ಮ ಅಲ್ಲೇ ಒಂದು ಚಾಪೆಯ ಮೇಲೆ ಕುಳಿತು ತಮಿಳು ಕಾದಂಬರಿಯೊಂದನ್ನು ಓದುತ್ತಲಿದ್ದಳು. ಆಗ, ಮಹಾದೇವನ್ ಅರಳಿದ ಮುಖದೊಡನೆ ಕೈಯಲ್ಲೊಂದು ಟೆಲಿಗ್ರಾಂ ಸಹಿತ ಪ್ರವೇಶಿಸಿದರು. "ಸರಸೂ, ಸರಸೂ, ಶೀಪ್ಲಾಪುತ್ತೂರ್ ಜಮೀನ್ದಾರ್ ವೆಂಕಟರಾಮ ಐಯ್ಯರಿಂದ ಟೆಲಿಗ್ರಾಂ, ಬಂದಿದೆ. ನಮ್ಮ ಅಂಬಿಯ ಜಾತಕ ಅವರ ಮಗಳ ಜಾತಕದೊಡನೆ ಚೆನ್ನಾಗಿ ಹೊಂದಿಕೊಂಡಿದೆಯಂತೆ. ಮದುವೆಗೆ ಮುಹೂರ್ತ ನಿಷ್ಕರ್ಷೆ ಮಾಡಿಬಿಡಬಹುದೇ ಎಂದು ಕೇಳಿ ಟೆಲಿಗ್ರಾಂ ಕೊಟ್ಟಿದ್ದಾರೆ." ಎಂದು ತಮ್ಮ ಮಡದಿಯನ್ನು ಕೇಳಿದರು. ಬಳಿಕ ತಮ್ಮ ಕುಮಾರನ ಕಡೆಗೆ ತಿರುಗಿ, "ನೀನೇನು ಹೇಳುತ್ತೀ? ಇಂಗ್ಲೆಂಡಿಗೆ ಹೋಗುವುದರೊಳಗಾಗಿ ನಿನ್ನ ಮದುವೆ ಆಗಬೇಕೆಂದು ಅಮ್ಮ ಪೀಡಿಸುತ್ತಿದ್ದಾಳೆ. ಇದು ಒಳ್ಳೆಯ ಸಂಬಂಧ, ಹತ್ತಾರು ಸಾವಿರ ರೂಪಾಯಿಗಳನ್ನು ರೊಕ್ಕವಾಗಿ ಕೊಡುತ್ತಾರಂತೆ. ಮತ್ತು ಐದು ಸಾವಿರಕ್ಕೆ ಬಲುವಳಿ ಕೊಡುತ್ತಾರಂತೆ. ಜಾತಕ ಹೊಂದಿಕೊಂಡರೆ ನಿನಗೆ ಈ ವಿಷಯ ತಿಳಿಸೋಣವೆಂದಿದ್ದೆ" ಎಂದರು.

ಸರಸ್ವತಿ "ಅಂಬಿ ಹೇಳುವುದೇನಿದೆ? ಹುಡುಗಿಯನ್ನು ನೋ

ಬೇಕು ಎನ್ನಬಹುದು. ಮಿಕ್ಕ ವಿಷಯಗಳಾವುದರಲ್ಲೂ ಅವನು ಕೊರತೆ ಹೇಳುವಂತಿಲ್ಲ. ದಿವ್ಯವಾದ ಸಂಬಂಧ. ಇದಕ್ಕಿಂತ ಒಳ್ಳೆಯ ಮನೆತನ ನಮಗೆಲ್ಲಿ ಸಿಗುತ್ತೆ ?"

ಮಹಾದೇವನ್, "ಹುಡುಗಿಯನ್ನು ಹೋಗಿ ನೋಡಿಬಂದು, ವಿವಾಹ ಮುಹೂರ್ತವನ್ನು ನಿಷ್ಕರ್ಷಿಸುವುದೇವರೆ ಸಾಕಷ್ಟು ಅವಕಾಶವಿಲ್ಲವಲ್ಲಾ. ಹುಡುಗಿಯ 'ಫೋಟೋ' ಒಂದನ್ನು ಕಳುಹಿಸುವಂತೆ ಟೆಲಿಗ್ರಾಂ ಕೊಟ್ಟರಾಯಿತು. ನಮ್ಮ ಮೀನಾಕ್ಷಿ, ಹುಡುಗಿಯನ್ನು ನೋಡಿರುವುದಾಗಿಯೂ ಲಕ್ಷಣವಾಗಿರುವುದಾಗಿಯೂ ಹೇಳಿದಳಲ್ಲಾ. ಅದಕ್ಕಿಂತ ಬೇರೇನು ಸಾಕ್ಷಿಬೇಕು ?"

ಅಂಬಿ, "ಹೂಂ ಆ ಹುಡುಗಿಯನ್ನು ಮದುವೆಯಾಗುವವಳು ಮೀನಾಕ್ಷಿಯಲ್ಲ. ನನಗೆ ಈಗ ಮದುವೆ ಬೇಕಿಲ್ಲ. ಇಂಗ್ಲೆಂಡಿಗೆ ಹೋಗಿ ಬಂದ ಬಳಿಕ ಆ ಯೋಚನೆ"

ವಿಜಯ "ಅಪ್ಪಾ, ನೀನೂ ಅಮ್ಮನೂ ಪ್ರಮಾದವಾಗಿ ಅಣ್ಣನಿಗೆ ಹೆಣ್ಣು ನೋಡುತ್ತಿರುವಿರಲ್ಲಾ ? ಅಣ್ಣನಂತೂ ಈಗಾಗಲೇ ತನಗಿಷ್ಟವಾದ ಹುಡುಗಿಯನ್ನು ಏರ್ಕಾಡಿನಲ್ಲಿ ಮದುವೆಯಾಗಿಬಿಟ್ಟ. ನನ್ನ ಅತ್ತಿಗೆ ಯಾರು ಗೊತ್ತೆ? ಲಕ್ಷ್ಮಿ!! ಎಂದಂದು ನೋಡಿ ನಕ್ಕಳು.

ಅನಿರೀಕ್ಷಿತವಾಗಿ ವಿಜಯ ಒಂದು ಗುಂಡು ಹಾರಿಸಿದಳೆನ್ನಿ. ಅಂಬಿಯ ಪಾಡು ಪೇಚಾಟಕ್ಕೆ ಇಟ್ಟುಕೊಂಡಿತು. ಮುಖ ಪೆಚ್ಚಾಯಿತು. ಅಷ್ಟರ ಮೇಲೆ ಅವನು ಅಲ್ಲಿ ನಿಲ್ಲಲಾರದೇ ಹೋದನು. ವಿಜಯಳನ್ನು ನುಂಗಿಬಿಡುವವನಂತೆ ದುರುದುರನೆ ನೋಡುತ್ತ ಅಲ್ಲಿಂದ ಎದ್ದು ತನ್ನ ಕೊಠಡಿಗೆ ಹೊರಟುಹೋದನು.

ಮಹಾದೇವನರವರ ಕಣ್ಣುಗಳಿಂದ ಕೋಪದ ಕಿಡಿ ಉದುರಿದವು. ತುಟಿಗಳು ಅದುರಿದವು. ಸರಸ್ವತಮ್ಮನನ್ನು ನುಂಗಿಬಿಡುವವರಂತೆ ದುರದುರನೆ ನೋಡುತ್ತ "ಆ ದರಿದ್ರ ಪಿಂಡವನ್ನು ನೀನು ಮನೆಯೊಳಗೆ ಕರೆತಂದಾಗಲೇ ಗೊತ್ತಿತ್ತು. ನಮ್ಮ ಕುಲವೇನು, ಗೋತ್ರವೇನು! ಅಂತಸ್ತೇನು!....ಬೀದಿಯಲ್ಲಿ ಅಲೆದಾಡುವ ನಾಯಿಗಳನ್ನು ಹಿಡಿದು ತಂದು ಸಿಂಹಾಸನದಲ್ಲಿ ಕುಳ್ಳಿರಿಸಿ ಜಾಗ ಕೊಟ್ಟದು ಸಾಲದುದೆಂದು

ಏರ್ಪಾಟಿಗೂ ಕರೆತಂದೆ. ಈಗ ನಮಗೆ ಅಪಮಾನವೇ ? ಇಲ್ಲ....ಅವರಿಗೆ ಅಪಮಾನವೇ ? ಹೆಂಗಸರಿಗೆ ಕೊಂಚ ಸ್ವಾತಂತ್ರ್ಯ ಕೊಟ್ಟರೆ ಈ ಲಕ್ಷಣವೇ ಹೌದು...." ಎಂದು ಗರ್ಜಿಸಿದರು.

"ಇಂದಿನಿಂದ ಆ ಹುಡುಗಿ ಬಂದು ನಮ್ಮ ಮನೆಯ ಹೊಸಲು ದಾಟಲಿ, ಜೋಕೆ! ಕಾಲು ಮುರಿದು ಹಾಕುತ್ತೇನೆ ಅಷ್ಟೆ. ಈ ಲಕ್ಷಣವಾದ ಹುಡುಗನಿಗೆ ಶ್ರೀಮಂತ ಕುಟುಂಬವಲ್ಲಿ ಗಣ್ಯವಾದ ಸ್ಥಳದಲ್ಲಿ ಹೆಣ್ಣು ನೋಡಿ ಮದುವೆ ಮಾಡಬೇಡ ಎನ್ನುವಿಯಲ್ಲಾ. ಅಮ್ಮನೂ, ಮಗನೂ ಹಾಳಾಗಿ ಹೋಗಿ. ನಾನೀಗ ಅವನ ಮದುವೆಗೆ ಏರ್ಪಾಟು ಮಾಡುವುದಿಲ್ಲ" ಎಂದು ರೇಗಿದರು.

ಸರಸ್ವತಮ್ಮ ನಿಜವಾಗಿಯೂ ತನ್ನ ಗಂಡನ ಸಿಟ್ಟನ್ನು ಕಂಡು ನಡುಗಿದಳು. ಮೆಲ್ಲಗೆ ಏನೋ, ಹೋಗಲಿ ಬಿಡಿ. ಅಂಬಿ ಹುಡುಗಾಟ ಆಡಿರಬೇಕು. ಅದನ್ನು ವಿಜಯ ಪರಿಹಾಸ್ಯ ಮಾಡಿರಬೇಕಷ್ಟೆ. ಎಲ್ಲಿ ಮದುವೆಯಾದರೆ ಸರಿಹೋಗುತ್ತೋ ಅಲ್ಲೇ ಮಾಡಿದರಾಯಿತು; ಅದಕ್ಕಾಗಿ ನೀವು ಇಷ್ಟು ಸಿಟ್ಟು ಮಾಡಿಕೊಂಡರೆ...." ಎಂದು ಸಮಾಧಾನ ಹೇಳತೊಡಗಿದರು.

ಅಷ್ಟರೊಳಗಾಗಿ ಐಯ್ಯರ್, "ಎಲ್ಲ, ನಿನ್ನ ನಯವಾದ ಮಾತುಗಳ ಒಳರ್ಥ ನನಗೆ ತಿಳಿದಿದೆ! ಸಾಕು, ಬಾಯಿಮುಚ್ಚು. ಆ ಹಾಳು ಹುಡುಗಿಯನ್ನು ನನ್ನ ಅನುಮತಿ ಇಲ್ಲದೆ ನನ್ನ ಮನೆಯೊಳಗೆ ಕರೆಸಲು ನಿನಗೆ ಅಧಿಕಾರವಿಲ್ಲ" ಎಂದು ಕಿರಿಚಿದರು.

ಸರಸ್ವತಮ್ಮನಿಗೆ ಏನು ಮಾಡುವುದೆಂಬುದು ಬಗೆಹರಿಯಲಿಲ್ಲ. ಅವರ ಕೋಪ ಕೊಂಚ ಕಡಿಮೆಯಾಗಲೆಂದು ಸುಮ್ಮನಾದಳು. ಆದರೆ ಅವರು ಸುಮ್ಮನಾಗಲಿಲ್ಲ. "ಈಹೊತ್ತಿನಿಂದ ಅವಳು ಸಂಗೀತ ಕಲಿಸಲು ಬರಬೇಕಾಗಿಲ್ಲ. ಅಭ್ಯಾಸ ನಿಲ್ಲಿಸಿಬಿಟ್ಟೆನೆಂದು ಬರೆದು ಕಳುಹಿಸು. ಏನು ನೋಡುತ್ತೀ?" ಎಂದು ಅಪ್ಪಣೆಯಿತ್ತು, ಅಲ್ಲಿಂದ ಎದ್ದು ಆಫೀಸು ರೂಮಿಗೆ ತೆರಳಿದ.

ವಿಜಯಳಿಗೆ ದುಃಖದಿಂದ ಗಂಟಲು ಬಿಗಿಯಿತು. "ಅಮ್ಮಾ, ಇನ್ನು ಲಕ್ಷ್ಮಿ ನಮ್ಮ ಮನೆಗೆ ಬರಲಾರಳೇ?" ಎಂದನುತ್ತಾ ಅಮ್ಮನ ತೋಳಲ್ಲಿ

ಒರಗಿಕೊಂಡು ಅಳತೊಡಗಿದಳು. ಸರಸ್ವತಮ್ಮನಿಗೂ ಲಕ್ಷ್ಮಿಯೆಂದರೆ ಅಚ್ಚುಮೆಚ್ಚು. ಅವಳಿಗೂ ದುಃಖ ಉಕ್ಕಿಬಂತು. ಪಕ್ಕದ ಕೊಠಡಿಯಲ್ಲಿ ನಿಂತ ಹಾಗೆಯೇ ತಂದೆಯ ಕಠೋರ ವಚನಗಳನ್ನು ಕೇಳಿದ ಜಂಬಿಗೂ ಸಿಟ್ಟೂ, ಶೋಕವೂ ಒಮ್ಮೆಲೆ ಹೆಚ್ಚಿತು. ಹುಚ್ಚು ಹಿಡಿದಂತಾಗಿ ಅವನು ಏಕಾಂಟಿನಲ್ಲಿ ಬಂಗಲೆಯ ತೋಟದಲ್ಲಿ ತೆಗೆದ ಲಕ್ಷ್ಮಿಯ ಚಿತ್ರವನ್ನು ನೋಡುತ್ತ ನಿಂತುಬಿಟ್ಟ.

೧೨

ಬೆಟ್ಟದ ಪ್ರಯಾಣದಿಂದ ಹಿಂದಿರುಗಿದ ಬಳಿಕ ಲಕ್ಷ್ಮಿ ಎಂದಿನಂತೆಯೇ ಪ್ರತಿನಿತ್ಯ ಸರಸ ಮಹಾಲಿಗೆ ಬಂದುಹೋಗುತ್ತಿದ್ದಳು. ವಿಜಯಳಿಗೆ ಸಂಗೀತ, ಕಸೂತಿ ಮುಂತಾದುವನ್ನು ಕಲಿಸುತ್ತಲೂ ಇದ್ದಳು. ಹೀಗಿರಲಾಗಿ, ಈನಡುವೆ ಸೀತಮ್ಮನಿಗೆ ವಿಪರೀತವಾದ ಹೊಟ್ಟೆಯ ನೋವು ಪ್ರಾರಂಭವಾಯಿತು. ಅವಳು ಪ್ರಾರಂಭದಲ್ಲಿ ಅದನ್ನು ಗಮನಿಸದೆ ನಿರ್ಲಕ್ಷ್ಯವಾಗಿ ಬಿಟ್ಟುಬಿಟ್ಟಳು. ಖಾಯಿಲೆ ದಿನದಿನಕ್ಕೆ ಹೆಚ್ಚುತ್ತಲಿತ್ತು. ಮನೆಯ ಕೆಲಸ ಗಮನಿಸಲೂ ಶಕ್ತಿಯಿಲ್ಲದೆ, ಹೊಲಿಗೆಯ ಕೆಲಸವನ್ನೂ ಮಾಡಲಾರದೆ ಸಖತ್ ಖಾಯಿಲೆ ಮಲಗಿಬಿಟ್ಟಳು. ಆ ಊರ ಡಾಕ್ಟರುಗಳಿಗೆ ಇದೆಂತಹ ಖಾಯಿಲೆಯೆಂದೇ ಮೊದಲು ಕಂಡುಹಿಡಿಯಲು ಸಾಧ್ಯವಾಗಲಿಲ್ಲ. ಲಕ್ಷ್ಮಿಯೇ ಎಲ್ಲ ಕೆಲಸವನ್ನು ಗಮನಿಸಬೇಕಾಯಿತು. ಇದಲ್ಲದೆ ಸರಸ ಮಹಲಿಗೂ ತಪ್ಪದೆ ಹೋಗಿಬರುತ್ತಿದ್ದಳು. ಲಕ್ಷ್ಮಿಯ ಸಂಪಾದನೆಯಲ್ಲೇ ಸಂಸಾರ ಸಾಗುತ್ತಿತ್ತು.

ಸೀತಮ್ಮನಿಗೆ ದಿನದಿನಕ್ಕೂ ಖಾಯಿಲೆ ಹೆಚ್ಚುತ್ತಲಿತ್ತು. ಒಂದು ದಿನ ರಾತ್ರಿ ಪೂರ್ತಿ ಹೊಟ್ಟೆಯ ನೋವು ತಡೆಯಲಾರದೆ ಹುಳುವಿನಂತೆ ಒದ್ದಾಡಿದಳು ಸೀತಮ್ಮ. ಲಕ್ಷ್ಮಿಯಂತೂ ವಿಪರೀತ ಹೆದರಿಬಿಟ್ಟಳು. ಮರುದಿನ ಬೆಳಗ್ಗೆ ಒಂದು ಜಟಕಾ ಏರ್ಪಾಟು ಮಾಡಿಕೊಂಡು ತಾಯಿಯನ್ನು ಆ ಊರ ಗವರ್ನಮೆಂಟ ಆಸ್ಪತ್ರೆಗೆ ಕರೆದುಕೊಂಡು ಹೋಗಿ ತೋರಿಸಿದಳು. ಸೀತಮ್ಮನ ಸ್ಥಿತಿ ಬಹಳ ಅಪಾಯಕಾರಕವಾಗಿಯೇ ಇತ್ತು. ದೊಡ್ಡ ಡಾಕ್ಟರರು ಚೆನ್ನಾಗಿ ಪರೀಕ್ಷೆ ಮಾಡಿ ನೋಡಿ, ಅದು

ಕರುಳಿನ ಸಂಬಂಧವಾದ ಅಪೆಂಡಿಸೈಟಿಸ್ ಬೇನೆಯೆಂದೂ, ತಕ್ಷಣ 'ಆಪರೇಷನ್' ಆಗಬೇಕೆಂದೂ ಲಕ್ಷ್ಮಿಗೆ ಹೇಳಿದರು. ಈ ಮಾತುಗಳು ಸೀತಮ್ಮನ ಕಿವಿಯಲ್ಲಿ ಬೀಳದಿರಲಿಲ್ಲ. ತಾನು ಸತ್ತು ಹೋದರೆ ಲಕ್ಷ್ಮಿಯ ಗತಿ ಏನಾಗುವುದೋ ಎಂದು ಹೆದರಿ ಕೊರಗಿದಳು. ಲಕ್ಷ್ಮಿಯ ಭವಿಷ್ಯವನ್ನು ಉದ್ದೇಶಿಸಿ ಮದರಾಸಿಗೆ ಹೋಗುವುದೇ ಒಳ್ಳೆಯದೆಂದು ತೀರ್ಮಾನಿಸಿದಳು. ಅವಳಿಗೆ ಪ್ರಾರಂಭದಲ್ಲಿ ಸಹಾಯ ಮಾಡಿದ ಡಾಕ್ಟರೂ, ಅವರ ತಾಯಿ ಲಕ್ಷ್ಮಮ್ಮನೂ ಈಗ ಮದರಾಸಿನಲ್ಲಿದ್ದರು. ತಾನು ಮದರಾಸಿಗೆ ಹೋಗಿ ಲಕ್ಷ್ಮಿಯನ್ನು ಅವರುಗಳ ವಶಕ್ಕೆ ಒಪ್ಪಿಸಿಬಿಟ್ಟರೆ ಶಾಂತಿಯಿಂದ ಸಾಯಬಹುದೆಂದು ಆವಳ ನಂಬಿಗೆಯಾಗಿತ್ತು.

ಅದೇ ರೀತಿ ಮದಾರಾಸಿಗೆ ಹೋಗುವುದೆಂದರೆ ದಾರಿಯ ಖರ್ಚಿಗೆ ಸಹ ಕೈಯಲ್ಲಿ ಸಾಕಷ್ಟು ಹಣವಿರಲಿಲ್ಲ. ಏನು ಮಾಡುವುದೆಂದು ಬಗೆ ಹರಿಯದೆ ತಾಯೂ ಮಗಳೂ ಸಂಕಟಪಟ್ಟರು. ಆಗ, ಸೀತಮ್ಮನಿಗೊಂದು ಯೋಚನೆ ಹೊಳೆಯಿತು. ಮಗಳನ್ನು ಕರೆದು, "ಲಕ್ಷ್ಮಿ ಈ ಹೊತ್ತು ಸರಸಮಹಾಲಿಂದ ಗಾಡಿ ಬಂದ ಕೂಡಲೇ, ಅಲ್ಲಿಗೆ ಹೋಗಿ ಮಾಮಿಯ ಹತ್ತಿರ ನಮ್ಮ ಕಷ್ಟಗಳನ್ನು ತಿಳಿಸಿ ಐವತ್ತು ರೂಪಾಯಿ ಸಾಲ ಕೇಳು. ಖಂಡಿತ ಕೊಡುವರು. ಅವರು ಧರ್ಮ ದೇವತೆಯಂತಿರುವರು; ನಮಗೆ ಇಷ್ಟರವರೆಗೂ ಎಷ್ಟೋ ಬಗೆಗಳಲ್ಲಿ ಉಪಕಾರ ಮಾಡಿರುವರು. ಇಂತಹ ಸಂಕಟ ಸಂದರ್ಭದಲ್ಲಿ ಕೈಬಿಡಲಾರರು.'' ಎಂದಳು. ಲಕ್ಷ್ಮಿ, "ಹಾಗೆಯೇ ಆಗಲಮ್ಮ, ನೀನು ಯಾವುದಕ್ಕೂ ಯೋಚಿಸಬೇಡ. ನಿಶ್ಚಿಂತೆಯಿಂದ ಮಲಗು. ನಾನು ಎಲ್ಲವನ್ನೂ ನೋಡಿಕೊಳ್ಳುತ್ತೇನೆ." ಎಂದಳು.

ಸೀತೆಗಂತೂ ಮಗಳನ್ನು ಕಂಡರೆ ಹೆಮ್ಮೆಯೋ ಹೆಮ್ಮೆ, "ಕಂದಾ ನಿನಗೆ ಈ ಚಿಕ್ಕ ವಯಸ್ಸಿನಲ್ಲೀ ದೇವರು ಅದೆಷ್ಟು ಸಹನ ಶಕ್ತಿ, ಧೈರ್ಯ ಕೊಟ್ಟಿರುವರು! ಆದರೆ ಅದೃಷ್ಟ ಮಾತ್ರ ಸಾಲದು! ನಿನ್ನ ಸಹಿಷ್ಣುತೆಯನ್ನು ಕಂಡಾದರೂ ದೇವರು ನಮ್ಮ ಕಷ್ಟಗಳನ್ನೂ, ಬಡತನವನ್ನೂ ಶಮನ ಮಾಡಬಾರದೇ" ಎಂದು ಕಣ್ಣೀರಿಟ್ಟಳು. ಅಷ್ಟರ ಮೇಲೆ ಅವಳಿಂದ ಮಾತನಾಡಲಾಗಲಿಲ್ಲ. ಆಯಾಸದಿಂದ ಕಣ್ಣು ಮುಚ್ಚಿ ಮಲಗಿದಳು. ತನ್ನ ತಾಯಿಯ ಶೋಕವನ್ನೂ ಬಲಹೀನತೆಯನ್ನೂ ಕಂಡು ಸಹಿಸದೆ ಆ ಹುಡುಗಿ

ಕಣ್ಣೀರಿಡುತ್ತ ಹೊದ್ದಿಕೆಯನ್ನು ಹೊದಿಸಿ, ಗಂಜಿ ತರಲು ಒಳಗೆಹೋದಳು.

ತಾಯಿಗೆ ಗಂಜಿ ಕೊಟ್ಟು, ಖಾಯಿಲೆಯ ವಿಷಯವನ್ನು ಕುರಿತು ಡಾಕ್ಟರ್ ರಂಗನಾಥನಿಗೆ ವಿಶದವಾಗಿ ತಿಳಿಸಿ, ಆ ಹೊತ್ತು ರಾತ್ರಿಯ ಗಾಡಿಯಲ್ಲೇ ತಾನು ತನ್ನ ತಾಯನ್ನು ಕರೆದುಕೊಂಡು ಮದರಾಸಿಗೆ ಹೊರಡುವುದಾಗಿ ತಿಳಿಸಿ ಟೆಲಿಗ್ರಾಂವೊಂದು ಬರೆದು ಆಳಗಾಯಿಯ ಕೈಯಲ್ಲಿ ಹಣದಸಹಿತ ಕೊಟ್ಟು ಪೋಸ್ಟಾಫೀಸಿಗೆ ಓಡಿಸಿದಳು. ಮದರಾಸಿಗೆ ಹೊರಡಲನುವಾಗಿ, ಬೇಕಾದ ಸಾಮಾನುಗಳನ್ನು ಕಟ್ಟಿಟ್ಟು, ಭದ್ರಪಡಿಸ ಬೇಕಾದುವುಗಳನ್ನು ಭದ್ರಪಡಿಸಿದಳು. ರಾತ್ರಿಯೆಲ್ಲ ನಿದ್ರೆಯಿಲ್ಲದೆ ಹೊಟ್ಟೆ ನೋವಿನಿಂದ ನರಳುತ್ತಿದ್ದ ಸೀತಮ್ಮನಿಗೆ ಅದೇ ತಾನೇ ಕೊಂಚ ಜೊಂಪು ಹತ್ತಿತ್ತು. ಆಗ ಸರಸ ಮಹಾಲಿನ ಸೇವಕ ಸಿದ್ದನು ಬಂದು ಲಕ್ಷ್ಮಿಯ ಕೈಯಲ್ಲಿ ಲಕೋಟೆಯೊಂದನ್ನು ಕೊಟ್ಟು ಹೊರಟು ಹೋದನು. ಲಕ್ಷ್ಮಿ ಆತುರಗೊಂಡು ಆ ಲಕೋಟೆಯನ್ನು ಒಡೆದು ನೋಡಲಾಗಿ ಅದರಲ್ಲೊಂದು ಚೀಟಿಯೂ, ಐದು ರೂಪಾಯಿಯ ನೋಟುಗಳು ಐದೂ ಇದ್ದುವು. ಚೀಟಿ ಯಲ್ಲಿ ಕೆಳಗೆ ಕಂಡಂತೆ ಬರೆದಿದ್ದಿತು.

ಪ್ರಿಯ ಲಕ್ಷ್ಮೀ.

ನಮ್ಮ ತಂದೆ ಇಂದಿನಿಂದ ನಿನ್ನ ಪ್ರೈವೇಟ್ ಟ್ಯೂಷನನ್ನು ನಿಲ್ಲಿಸಿ ಬಿಡಬೇಕೆಂದು ಕಟ್ಟಪ್ಪಣೆ ಮಾಡಿದ್ದಾರೆ. ನನಗೂ, ಅಮ್ಮನಿಗೂ, ಅಂಬಿಗೂ ಇದು ಕೊಂಚವೂ ಇಷ್ಟವಿಲ್ಲ. ಆದರೂ ಕೂಡ ತಂದೆಯವರ ಅಪ್ಪಣೆಯನ್ನು ಮೀರಲಾರದೆ ಪೇಚಾಡುತ್ತಿದ್ದೇವೆ. ಇದಕ್ಕಿಂತ ಹೆಚ್ಚಾಗಿ ಬರೆಯಲು ನನಗೆ ಓಡುವುದಿಲ್ಲ. ಈ ತಿಂಗಳು ನಿನಗೆ ಕೊಡಬೇಕಾಗಿದ್ದ ದುಡ್ಡನ್ನು ಅಮ್ಮಾ ಇದರ ಸಹಿತ ಕಳುಹಿಸಿದ್ದಾಳೆ. ನಿನ್ನನ್ನು ನಮ್ಮ ಮನೆಗೆ ಬರ ಬಾರದೆಂದು ತಂದೆಯವರು ಏಕೆ ಅಂದರೆಂಬುದರ ಕಾರಣವನ್ನು ದಯ ವಿಟ್ಟು ತಿಳಿದುಕೊಳ್ಳಲು ಯತ್ನಿಸಬೇಡ.

ಇನ್ನು, ನಾವಿಬ್ಬರೂ ಸಂಧಿಸುವ ಸುದಿನ ಎಂದು ಲಭಿಸುವುದೋ ಕಾಣೆ.

ನಿನ್ನ ಪ್ರೀತಿಯ ಗೆಳತಿ
**ವಿಜಯ**

ಲಕ್ಷ್ಮಿ ಕಾಗದವನ್ನು ಮತ್ತೆ ಓದಿದಳು. ಏಕೆ ಈ ರೀತಿ ದೇವರು ಕಷ್ಟದ ಮೇಲೆ ಕಷ್ಟ ಕೊಡುತ್ತಾನೆಂದು ನೆನೆನೆನೆದು ಮರುಗಿದಳು. ಈ ವಿಷಯವನ್ನು ತನ್ನ ತಾಯಿಯು ಅರಿತರೆ ತಡೆಯಲಾರಳೆಂದು ಲಕ್ಷ್ಮಿಗೆ ಗೊತ್ತಿತ್ತು. ಆದುದರಿಂದ ಅದನ್ನು ಅವಳು ಸೀತಮ್ಮನಿಗೆ ತಿಳಿಸಲೇ ಇಲ್ಲ.

ಸೀತಮ್ಮ ನಿದ್ರೆಯಿಂದ ಎಚ್ಚೆತ್ತೊಡನೆಯೇ ಕೊಂಚ ಕಾಫೀ ತಂದು ಕುಡಿಸಿದಳು ಲಕ್ಷ್ಮಿ. ಬಳಿಕ ಸಿಧಾನವಾಗಿ, "ಅಮ್ಮಾ ಮಧ್ಯಾಹ್ನ ಸರಸ ಮಹಲಿನಿಂದ ಸಿದ್ದ ಬಂದಿದ್ದ. ಅಂಗಡಿ ಬೀದಿಗೆ ಬಂದನಂತೆ, ಹಾಗೆಯೇ ನಮ್ಮ ಮನೆಗೂ ಏನಾದರೂ ತರಬೇಕೇ ಎಂದು ಕೇಳಲು ಬಂದಿದ್ದ. ಅವನ ಕೈಯಲ್ಲೇ ಮಾಮಿಗೊಂದು ಕಾಗದವನ್ನು ಕಳುಹಿಸಿದೆ. ಇಪ್ಪತ್ತೈದು ರೂಪಾಯಿಗಳನ್ನು ಮಾತ್ರ ಕಳುಹಿದ್ದಾರೆ." ಎಂದಳು.

ಸೀತಮ್ಮ, "ಏನೋ ಪಾಪ, ಚಿನ್ನದಂತಹ ಗುಣ ಅವರದು. 'ಇಲ್ಲ' ಎಂದು ಹೇಳದೆ ಸಮಯಕ್ಕೆ ಇದನ್ನಾದರೂ ಕಳುಹಿದರಲ್ಲಾ. ಅಷ್ಟೇ ಸಾಕು. ದೇವರು ಅವರನ್ನು ಸುಖವಾಗಿಡಲಿ" ಎಂದನ್ನುತ್ತಿರುವಾಗಲೇ ಸೀತಮ್ಮನಿಗೆ ಮೇಲುಸಿರು ಬಂತು.

ಲಕ್ಷ್ಮಿ ತನ್ನ ತಾಯ ದುರ್ಬಲತೆಯನ್ನು ಕಂಡು ಹೆದರಿ, "ಅಮ್ಮಾ ಸುಮ್ಮನೆ ಮಲಗು. ಮಾತನಾಡಿ ಆಯಾಸಮಾಡಿಕೊಳ್ಳಬೇಡ. ರಾತ್ರಿ ರೈಲು ಪ್ರಯಾಣ ಮಾಡಬೇಕಲ್ಲಾ" ಎಂದಂದು ಅಮ್ಮನ ಮುಖ ಬೆವತಿರುವುದನ್ನು ಕಂಡು, ಕೈವಸ್ತ್ರದಿಂದ ಒರಸಿದಳು.

ರಾತ್ರಿ ರೈಲಲ್ಲಿ ಇಬ್ಬರೂ ಮದರಾಸಿಗೆ ಹೊರಟರು. ರೈಲಲ್ಲಿ ದಾರಿಯುದ್ದಕ್ಕೂ ಲಕ್ಷ್ಮಿ ಕಣ್ಣುಮುಚ್ಚದೆ ಅಮ್ಮನ ಶುಶ್ರೂಷೆಯಲ್ಲೇ ನಿರತಳಾಗಿದ್ದಳು. ಮರುದಿನ ಬೆಳಿಗ್ಗೆ ಡಾಕ್ಟರ್ ರಂಗನಾಥನ್ ಸೆಂಟ್ರಲ್ ಸ್ಟೇಷನಿಗೆ ಬಂದಿದ್ದರು. ಸೀತಮ್ಮನ ದೇಹಸ್ಥಿತಿ ಕಂಡು ಬೆಚ್ಚಿಬಿದ್ದರು. ಸೀತಮ್ಮನನ್ನೂ ಲಕ್ಷ್ಮಿಯನ್ನೂ ಅಲ್ಲಿಂದ ನೇರಾಗಿ ಜನರಲ್ ಆಸ್ಪತ್ರೆಗೇ ಕರೆದೊಯ್ದರು. ಆಸ್ಪತ್ರೆಯ ದೊಡ್ಡ ಡಾಕ್ಟರ್ ಅವರ ನೆಚ್ಚಿನ ಗೆಳೆಯರಾದುದರಿಂದ, ಅವರಿಂದ ಆ ಕೂಡಲೇ ಸೀತಮ್ಮನ ದೇಹಸ್ಥಿತಿಯನ್ನು ಪರೀಕ್ಷೆಮಾಡಿಸಿದರು. ಬಹಳ ಅಪಾಯಕರವಾದ ಕೇಸೆಂದೂ, ಕೂಡಲೇ 'ಆಪರೇಷನ್' ಮಾಡಿಬಿಡಬೇಕೆಂದೂ ದೊಡ್ಡ ಡಾಕ್ಟರು ಅಭಿಪ್ರಾಯ

ಪಟ್ಟರು. ಲಕ್ಷ್ಮಿಯೂ ಸೀತಮ್ಮನೂ ಹೆದರಿಬಿಡುವರೆಂದು ಆ ವಿಷಯವನ್ನು ರಂಗನಾಥನ್ ಅವರುಗಳಿಗೆ ತಿಳಿಸಲೇ ಇಲ್ಲ. ಆ ಮಧ್ಯಾಹ್ನ ಒಂದು ಘಂಟೆಗೆ ಸರಿಯಾಗಿ ಸೀತಮ್ಮನಿಗೆ ಆಪರೇಷನ್ ಮಾಡುವುದೆಂದು ಏರ್ಪಾಟಾಯಿತು. ಡಾಕ್ಟರ್ ರಂಗನಾಥನ್ ಸೀತಮ್ಮನನ್ನು ಆಸ್ಪತ್ರೆಗೆ ಸೇರಿಸಿ, ಅವಳ ಜೊತೆಯಲ್ಲಿ ಲಕ್ಷ್ಮಿಯನ್ನು ಇರಿಸಿ, ತಾನು ಹತ್ತಿರದ ಹೋಟಲೊಂದಕ್ಕೆ ಹೋಗಿ ಲಕ್ಷ್ಮಿಗೆ ಕಾಫೀ ಫಲಾಹಾರ ಕೊಂಡು ತಂದುಕೊಟ್ಟರು.

ಆ ಹೊತ್ತು ಮಧ್ಯಾಹ್ನ ಸೀತಮ್ಮನಿಗೆ ಆಪರೇಷನ್ ಆಯಿತು. ಡಾಕ್ಟರ್ ರಂಗನಾಥನ್, ಹುಡುಗಿ ಲಕ್ಷ್ಮಿಯನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಬಿಟ್ಟು, ತನ್ನ ಮಾತೆ ಲಕ್ಷ್ಮಮ್ಮನನ್ನು ಆಸ್ಪತ್ರೆಗೆ ಕರೆತಂದು ಸೀತಮ್ಮನ ಜೊತೆಯಲ್ಲಿ ಇರಹೇಳಿದರು. ಸೀತಮ್ಮನ ದೇಹಸ್ಥಿತಿ ಒಂದು ತಿಂಗಳ ಕಾಲ ಬಹಳ ಚಿಂತೆಗೀಡಾಗಿತ್ತು. ಲಕ್ಷ್ಮಿಯ ದುಃಖವನ್ನೂ, ಪರಿತಾಪಕರವಾದ ಸ್ಥಿತಿಯನ್ನೂ ಕಂಡವರು ಅಯ್ಯೋ ಎನ್ನುವಂತಿತ್ತು. ಲಕ್ಷ್ಮಮ್ಮ ಹಗಲಿರುಳೂ ಸೀತಮ್ಮನ ಸಮೀಪದಲ್ಲಿದ್ದು ಶುಶ್ರೂಷೆ ಮಾಡುತ್ತಿದ್ದರು. ಡಾಕ್ಟರು ದಿನಕ್ಕೊಮ್ಮೆ ಲಕ್ಷ್ಮಿಯನ್ನು ಆಸ್ಪತ್ರೆಗೆ ಕರೆದೊಯ್ದು ಅವಳ ತಾಯನ್ನು ತೋರಿಸಿಕೊಂಡು ಬರುತ್ತಿದ್ದರು. ಅವರು, ಅವರ ಪತ್ನಿ ಕರ್ಪಗಾಂಬಾಳ್ ಒಬ್ಬರು ತಪ್ಪಿದರೊಬ್ಬರು ಲಕ್ಷ್ಮಿಗೆ ಸಮಾಧಾನ ಹೇಳುತ್ತಲಿದ್ದರು.

ಡಾಕ್ಟರರ ಎಂಟು ವರ್ಷದ ಪುತ್ರಿ ಮಂಜುಳೆಯೂ, ಐದು ವಯಸ್ಸಿನ ಪುತ್ರ ಶ್ರೀಧರನೂ ಲಕ್ಷ್ಮಿಯ ಹತ್ತಿರ ಚೆನ್ನಾಗಿ ಹೊಂದಿಕೊಂಡು ಬಿಟ್ಟರು. ಲಕ್ಷ್ಮಿ ಆಸ್ಪತ್ರೆಗೆ ಹೋಗಿ ಬರುವ ವೇಳೆಯ ಹೊರತಾಗಿ ಮಿಕ್ಕ ಸಮಯಗಳಲ್ಲಿ ಮಕ್ಕಳೊಡನೆ ಆಡುವುದರಲ್ಲಿ ಕಾಲ ಕಳೆಯುತ್ತಿದ್ದಳು. ಅವರಿಗೆ ಬಗೆಬಗೆಯ ಆಟಗಳನ್ನೂ, ಹಾಡುಗಳನ್ನೂ ಪಾಠಗಳನ್ನೂ ಕಲಿಸುವಳು. ನಡುನಡುವೆ ಕರ್ಪಗಾಂಬಾಳಿಗೆ ಮನೆಯ ಕೆಲಸಗಳಲ್ಲಿ ನೆರವಾಗುತ್ತಿದ್ದಳು. ಅವಳ ಮನಗಣ್ಣಮುಂದೆ ಪದೇ ಪದೇ ವಿಜಯಳ ಸ್ವರೂಪವೂ, ಅಂಬಿಯ ಮನ್ಮಥರೂಪವೂ ತೋರಿ ಬರುತ್ತಿತ್ತು. ಅಂಬಿ ತನ್ನನ್ನು ಪ್ರೀತಿಸುವ ಕಾರಣವನ್ನು ಅರಿತೇ ಅವನ ತಂದೆ ಆ ರೀತಿಯಾಗಿ ಅವರ ಮನೆಗೆ ತಾನು ಬರುವುದನ್ನು ತಡೆಮಾಡಿರುವರು ಎಂಬುದನ್ನು ಅರಿತಳು. ಯಾವ

ದೋಷವೂ ಮಾಡದ ತನ್ನನ್ನು ಈ ರೀತಿ ಅಪಮಾನ ಮಾಡಿದ ಆ ಕುಟುಂಬ ದವರ ಮುಖವನ್ನು ತಾನು ಎಂದೆಂದಿಗೂ ನೋಡುವುದಿಲ್ಲವೆಂದು ನೆನೆದಳು. ಸೇಲಂ ಕಡೆಗೆ ಹೋಗುವುದಿಲ್ಲವೆಂದು ತೀರ್ಮಾನಿಸಿಕೊಂಡಳು. ಆದರೆ.... ಆದರೆ, ಅಂಬಿಯ ಮೇಲೆ ಅವಳಿಗೆ ಏರ್ಪಟ್ಟಿದ್ದ ಪ್ರೀತಿಯು, ದಿನದಿನಕ್ಕೂ ಹೆಚ್ಚುತ್ತಲೇ ಇತ್ತು. ನಿಸರ್ಗದ ನಿಯಮವೇ ಹಾಗಿತ್ತೆಂದಮೇಲೆ ಅವಳೇನು ಮಾಡಬಲ್ಲಳು. ಅಂಬಿ, ಈಗ ವಿಲಾಯಿತಿಗೆ ತೆರಳಿರಬಹುದೆಂದೂ, ಅವನು ವಿಲಾಯಿತಿಗೆ ಹೋಗುವುದಕ್ಕೆ ಮೊದಲು ಅವನನ್ನು ಒಂದು ಸಲವಾದರೂ ತಾನು ಕಂಡಿದ್ದರೆ ಚೆನ್ನಾಗಿರುತ್ತಿತ್ತೆಂದೂ ಚಿಂತಿಸಿದಳು. ತಮ್ಮಿಬ್ಬರ ಪುನಿತಪ್ರೇಮವನ್ನರಿಯದೆ ಮಹಾದೇವನ್‌ರವರು ಹಣ, ಹಣ, ವೆಂದು ಗರ್ವಪಡುತ್ತಿರುವರಲ್ಲಾ ಇದು ನಮ್ಮ ಸಮಾಜದ ಕಳಂಕವರ್ತನೆಯೇ ಸರಿ. ನಮ್ಮ ಸಮಾಜದಲ್ಲಿ ಇಂತಹ ಪದ್ಧತಿಗಳೂ, ಮೂಢ ವರ್ತನೆಗಳೂ ನಿರ್ಮೂಲವಾಗಿ ಸಮಾಜವು ಬಡವ, ಬಲ್ಲಿದ ಎಂಬ ತಾರತಮ್ಯವನ್ನು ಕಿತ್ತೊಗೆದು ಎಲ್ಲರನ್ನೂ ಒಂದೇರೀತಿಯಾಗಿ ಕಂಡು ವಿಶ್ವಪ್ರೇಮದಿಂದ ಸಂತೈಸುವುದು ಎಂದು ? ಎಂದು ಚಿಂತಿಸಿದಳು.

ಸೀತಮ್ಮನನ್ನು ಆಸ್ಪತ್ರೆಯಿಂದ ಮನೆಗೆ ಕಳುಹಿಸಲು ಇನ್ನೊಂದು ತಿಂಗಳಾದರೂ ಬೇಕೆಂದು ಹೇಳಿಬಿಟ್ಟರು ದೊಡ್ಡ ಡಾಕ್ಟರು. ಈ ನಡುವೆ ಲಕ್ಷ್ಮಿಗೆ ಸ್ಕೂಲ್ ಫೈನಲ್ ಫಸ್ಟ್‌ಕ್ಲಾಸಿನಲ್ಲಿ ಪ್ಯಾಸಾಯಿತೆಂದು ತಿಳಿದು ಬಂದಿತು. ಕಾಲೇಜುಗಳೂ ತೆರೆಯಲ್ಪಟ್ಟವು. ಲಕ್ಷ್ಮಿಯನ್ನು ಮದರಾಸಿನ ಕ್ವೀನ್ ಮೇರೀಸ್ ಕಾಲೇಜಿನಲ್ಲೇ ಸೇರಿಸಿಬಿಡುವುದಾಗಿಯೂ, ತನ್ನ ಗುಮಾಸ್ತನೊಬ್ಬನನ್ನು ಸೇಲಂಗೆ ಕಳುಹಿಸಿ ಅವರುಗಳು ಅಲ್ಲಿ ಬೀಗ ಹಾಕಿಟ್ಟಿರುವ ಮನೆಯನ್ನು ಖಾಲಿ ಮಾಡಿಸಿ, ಸಾಮಾನುಗಳನ್ನು ತರಿಸಿ ಬಿಡುವುದಾಗಿಯೂ ಸೀತಮ್ಮನ ಹತ್ತಿರ ಡಾಕ್ಟರು ಹೇಳಲಾಗಿ, ಸೀತಮ್ಮನೂ ಅದಕ್ಕೆ ಒಪ್ಪಿದಳು.

ಸೀತಮ್ಮನಿಗೆ ಮೈಯಲ್ಲಿ ಕೊಂಚ ಶಕ್ತಿ ಬಂದಬಳಿಕ ಲಕ್ಷ್ಮಿ ತಾವು ಹೊರಡುವ ದಿನ ಸರಸಮ್ಮಹಲಿನಿಂದ ತನಗೆ ಬಂದ ಕಾಗದ ವಿಷಯ ವನ್ನು ಹೇಳಿದಳು. ಸೀತಮ್ಮ, ಇಂತಹ ಕಾಗದ ಬಂದುದರ ಕಾರಣ ತಿಳಿಯದೆ ಪೇಚಾಡಿದಳು. ಲಕ್ಷ್ಮಿಯನ್ನು ಕೇಳಿಯೂ ಕೂಡ ಉಪಯೋಗ

ವಿಲ್ಲದೆ ಹೋಯಿತು. ಸರಿ ಇನ್ನು ನಾವು ಸೇಲಂಗೆ ಹೋಗುವುದು ಉಚಿತವಲ್ಲವೆಂದೂ ಮುಂಚಿನ ದೇಹದಾರ್ಢ್ಯ ಬಂದಮೇಲೆ ಮದರಾಸಿನಲ್ಲೇ ಸಣ್ಣದೊಂದು ಮನೆ ಗೊತ್ತುಮಾಡಿಕೊಂಡು ಅಲ್ಲೇ ಇದ್ದುಬಿಡುವುದೆಂದೂ ತೀರ್ಮಾನಿಸಿಬಿಟ್ಟಳು.

೧೩

ಲಕ್ಷ್ಮಿ ಬರುವುದನ್ನು ನಿಲ್ಲಿಸಿದಂದಿನಿಂದ ಉತ್ಸಾಹಭರಿತವಾಗಿದ್ದ ಸರಸಮಹಲಿನಲ್ಲಿ ಎಲ್ಲಿಯೂ ಮೌನವೇ. ವಿಜಯಳನ್ನು ನೋಡಿದರೆ 'ಅಯ್ಯೋ ಪಾಪ' ಎನಿಸುತ್ತಿತ್ತು. ಅವಳಿಗೆ ಲಕ್ಷ್ಮಿ ಹತ್ತಿರ ಇಲ್ಲದೆ ಪ್ರಪಂಚವೇ ಶೂನ್ಯವಾಗಿ ತೋರಿತು. ಸಂಗೀತದಲ್ಲಿ ಒಂದು ಅಭಿರುಚಿಯಾಗಲಿ, ಮಾತಿನಲ್ಲೊಂದು ಸ್ವಾರಸ್ಯವಾಗಲಿ ಏರ್ಪಡಲಿಲ್ಲ. ಎಲ್ಲವನ್ನೂ ತೊರೆದ ಸನ್ಯಾಸಿನಿಯಂತೆ ತೋರಿದಳು. ಸದಾಕಾಲವೂ ತಾನೂ ಲಕ್ಷ್ಮಿಯೂ ಕೂಡಿ ಆಡುತ್ತಲಿದ್ದ ಆನಂದದ ದಿನಗಳನ್ನು ನೆನೆಸಿಕೊಳ್ಳುತ್ತಲೂ ಅವಳನ್ನೂ ಲಕ್ಷ್ಮಿಯನ್ನೂ ಎರ್ಕಾಟಿನಲ್ಲಿ ಅಂಬಿ ಜೊತೆಯಾಗಿ ನಿಲ್ಲಿಸಿ ತೆಗೆದ ಬಗೆಬಗೆಯ ಚಿತ್ರಗಳ ಆಲ್ಬಮ್ಮನ್ನು ತಿರುವಿ ನೋಡಿ ನಿಟ್ಟುಸಿರುಬಿಡುತ್ತಲೂ ಇದ್ದಳು. ಎಂದಿನಂತೆ ಲಕ್ಷ್ಮಿ ತಮ್ಮ ಮನೆಗೆ ಬಂದು ಹೋಗುತ್ತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತೆಂದು ಮತ್ತೆ ಮತ್ತೆ ನೆನೆದುಕೊಳ್ಳುತ್ತಿದ್ದಳು.

ವಿಜಯಳ ಮನೋವೇದನೆಯನ್ನರಿತ ಅವಳ ತಾಯಿತಂದೆಯರು ಅವಳನ್ನು ಸಮಾಧಾನಗೊಳಿಸುವುದಕ್ಕಾಗಿ ಹಲವು ವಿಧಗಳಲ್ಲಿ ಯತ್ನಿಸಿದರು. ಸರಸ್ವತಮ್ಮನಿಗೂ ಈಗ ಮನೆ ಶೂನ್ಯವಾಗಿಯೇ ತೋರಿತು. ಮಹಾದೇವನ್‌ರವರಿಗೂ ಕೂಡ ಮನೆ 'ಬಿಂ' ಎನ್ನಿಸಿತು. ಅಂಬಿಯ ಮನೋವೇದನೆಯನ್ನಂತೂ ವಿವರಿಸುವುದು ಅಸಾಧ್ಯವಾಯಿತು. ಸದಾಕಾಲವೂ ಹಾಸ್ಯಪ್ರಿಯನಾದ ಅಂಬಿಯು ಈಗ ಮೌನವನ್ನವಲಂಭಿಸಿದ. ಅವನನ್ನು ಮಾತನಾಡಿಸಲು ಯಾರಿಗೂ ಧೈರ್ಯವಿಲ್ಲ. ತನ್ನ ಪ್ರೀತಿಯ ಲಕ್ಷ್ಮಿಗೆ ಏರ್ಪಟ್ಟಂತಹ ಅಪಮಾನವನ್ನು ನೆನೆನೆನೆದು ಮರುಗಿದ.

ಒಂದು ದಿನ ಲಕ್ಷ್ಮಿಯನ್ನೂ ಅವಳ ತಾಯಿಯನ್ನೂ ಕಂಡು ಮಾತ

ನಾಡಿಸಿ ತನ್ನ ಮತ್ತು ತನ್ನ ತಾಯಿ ತಂದೆಯರ ಪರವಾಗಿ ಅವರ ಹತ್ತಿರ ಕ್ಷಮೆ ಬೇಡಬೇಕೆಂದೂ, ಯಾವಘಳಿಗೆಯಲ್ಲೂ ಅವರಿಗೆ ಸಹಾಯ ಮಾಡಲು ತಯಾರಿರುವುದಾಗಿ ಹೇಳಿಬರಬೇಕೆಂದು ಲಕ್ಷ್ಮಿಯ ಮನೆಗೆ ಹೊರಟನು. ಆದರೆ ಮನೆಗೆ ಬೀಗ ಹಾಕಿತ್ತು. ಅವರುಗಳು ಎಲ್ಲಿಗೆ ಹೋದರೆಂದು ನೆರೆಹೊರೆಯವರನ್ನು ವಿಚಾರಿಸಿದನು. ಸೀತಮ್ಮನ ಆರೋಗ್ಯವು ಬಹಳ ಕೆಟ್ಟುಹೋಗಿ ಸಖತ್ ಖಾಯಿಲೆ ಮಲಗಿಬಿಟ್ಟಳೆಂದೂ ವೈದ್ಯಚಿಕಿತ್ಸೆಗೆ ನೆಂಟರ ಊರಿಗೆ ಹೋಗಿರುವಳೆಂದೂ ತಿಳಿಯಿತೇವಿನಃ ಅವರ ಸರಿಯಾದ ವಿಳಾಸ ತಿಳಿಯಲಿಲ್ಲ. ಅಂಬಿಗೆ ಈ ಮಾತು ಕೇಳಿ ಬಹಳ ವ್ಯಾಕುಲವಾಯಿತು. ಆದರೆ ಅವರುಗಳ ವಿಳಾಸವನ್ನು ಅರಿಯಲು ಅದೆಷ್ಟು ಯತ್ನಿಸಿಯೂ ಸಫಲನಾಗಲಿಲ್ಲ. ಆದರೆ ಅವರುಗಳಿಗೆ ನೆಂಟರಿಷ್ಟರಾರೂ ಇರಲಿಲ್ಲವೆಂದು ಅವನಿಗೆ ಗೊತ್ತುಂಟು. ಅದೆಲ್ಲಿಗೆ ಹೋದರೋ ಎಂತಹ ಕಷ್ಟಗಳನ್ನು ಅನುಭವಿಸುತ್ತಿರುವರೋ ಎಂದು ಬಹಳ ವ್ಯಥೆಗೀಡಾದ.

ಅಂಬಿ ವಿಲಾಯಿತಿಗೆ ಹೊರಡುವ ದಿನವು ಸಮೀಪಿಸುತ್ತಿತ್ತು. ಸರಸ್ವತಮ್ಮನೂ, ಅವಳ ಯಜಮಾನರೂ ಸಿಪ್ಪಾಪುತ್ತೂರಿನ ಹುಡುಗಿಯನ್ನು ಮದುವೆಯಾಗೆಂದು ಅಂಬಿಯನ್ನು ಎಷ್ಟೋ ಬಲವಂತಮಾಡಿದರೂ ಪ್ರಯೋಜನವಾಗಲಿಲ್ಲ.

ಅವನು ವಿಲಾಯಿತಿಗೆ ತೆರಳಿದ ಬಳಿಕ ವಿಜಯಳಿಗೆ ಮತ್ತಷ್ಟು ಕಷ್ಟವಾಯಿತು. ಹುಚ್ಚುಹಿಡಿದವಳಂತೆ, ಯಾವುದರಲ್ಲೂ ಪ್ರೀತಿ ತೋರದೆ ಸದಾ ಚಿಂತೆಯಲ್ಲೇ ಮಗ್ನಳಾಗಿದ್ದಳು. ಅವಳ ತಾಯಿತಂದೆಯರು ಅವಳನ್ನು ದಿನಕ್ಕೊಂದು ಸ್ಥಳಕ್ಕೆ ಕರೆದೊಯ್ಯುವರು. ಟಾಕೀಗೆ ಹೋಗಿಬರುವದಂತೂ ಲೆಕ್ಕವಿಲ್ಲ. ಅವಳನ್ನು ಉತ್ಸಾಹಗೊಳಿಸಲು ಅವರೆಷ್ಟು ಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ.

## ೧೪

ದಿನಗಳು ತಿಂಗಳುಗಳಾಗಿಯೂ ತಿಂಗಳುಗಳು ವರ್ಷಗಳಾಗಿಯೂ ಉರುಳುತ್ತಿದ್ದವು. ಇಷ್ಟರೊಳಗಾಗಿ ಒಬ್ಬರಿಗೊಬ್ಬರು ಅನ್ಯೋನ್ಯವಾಗಿದ್ದವರೆಲ್ಲರೂ ಮೂಲೆಗೊಬ್ಬರಂತೆ ಅಗಲಿದರೆನ್ನಿ.

ಒಂದು ದಿನ ಸಂಜೆ ಬೆಳಿಗ್ಗಿನಿಂದಲೂ ಎಡೆಬಿಡದೆ ಮಳೆ ಸುರಿಯು ತ್ತಿತ್ತು. ಮೋಡವಂತೂ ಆಕಾಶವಲ್ಲಿ ದಟ್ಟವಾಗಿ, ಆವರಿಸಿತ್ತು. ಕಲೆಕ್ಟರ್ ರಾಜಗೋಪಾಲ್ ಐ. ಸಿ. ಎಸ್. ಆ ಹೊತ್ತು ಹೊರಗೆ ಎಲ್ಲಿಗೂ ಹೋಗದೆ ಆಫೀಸಿನಿಂದ ನೆಟ್ಟಗೆ ತಮ್ಮ ಬಂಗಲೆಗೆ ಬಂದುಬಿಟ್ಟರು. ಕಾಫೀ ಫಲಾಹಾರವಾದ ಬಳಿಕ 'ಡ್ರಾಯಿಂಗ್' ಹಾಲಲ್ಲಿ ರೇಡಿಯೋ ಕೇಳುತ್ತ ಸೋಫಾದಲ್ಲಿ ಕುಳಿತಿದ್ದರು

ಆಗ ಒಬ್ಬ ಸೇವಕನು ಬಂದು "ವೀರಭಾರತಕೇ ಸಂಪಾದಕ ಮಹಾಶಯ ಆಯಾಹೈ ಮಹಾರಾಜ್" (ವೀರಭಾರತಿಯ ಸಂಪಾದಕರು ಬಂದಿದ್ದಾರೆ) ಎಂದು ಭಯಭಕ್ತಿಯಿಂದ ಹಿಂದೀ ಭಾಷೆಯಲ್ಲಿ ನುಡಿದನು.

ತಕ್ಷಣ ಕಲೆಕ್ಟರ್ ಸಾಹೇಬರ ಮುಖ ಅರಳಿತು "ಸರಿ, ಇಲ್ಲಿ ಕರೆತಾ" ಎಂದು ಅಪ್ಪಣೆಯಿತ್ತರು.

ಮರುಘಳಿಗೆ, ಗಂಭೀರವಾದ ಮುಖಮುದ್ರೆಯಿಂದೊಡಗೂಡಿದ ಗಣ್ಯವ್ಯಕ್ತಿಯೊಬ್ಬರು ಪ್ರವೇಶಿಸಿ ಕೈ ಜೋಡಿಸಿ ವಂದಿಸಿ, ಕಲೆಕ್ಟರ ಸಮೀಪವಲ್ಲಿದ್ದ ಮತ್ತೊಂದು ಸೋಫಾದಲ್ಲಿ ಕುಳಿತರು.

ಕಲೆಕ್ಟರ್ "ತಮ್ಮ ದರ್ಶನ ಸಿಗುವುದೇ ಅಪರೂಪವಾಗಿಬಿಟ್ಟಿದೆ! ಈ ಮಳೆಯಲ್ಲಿ ಇಷ್ಟು ದೂರ ಬಂದಿರಲ್ಲಾ ಪಾಪ! ತಮ್ಮನ್ನು ಕಂಡಕೂಡಲೇ ನನಗೇಕೋ ಒಂದು ರೀತಿಯ ಹುರುಪು ಉಂಟಾಗುತ್ತದೆ."

ಸಂಪಾದಕರು "ಸೇರಿದಂತೆ ಹತ್ತು ದಿನಗಳು ನಿಮ್ಮನ್ನು ನೋಡದೇ ಹೋದರೆ, ನನಗೇಕೋ ಬಹಳ ಬೇಜಾರು. ಇಲ್ಲಿಗೆ ವರ್ಗವಾಗಿ ಬಂದು ಅತ್ಯಲ್ಪಕಾಲದಲ್ಲಿಯೇ ಇಲ್ಲಿಯ ಪ್ರಜೆಗಳಿಗೆ ತಾವು ಹಲವು ಬಗೆಗಳಲ್ಲಿ ಒಳ್ಳೆಯದು ಮಾಡಿ, ಅವರುಗಳ ಮನ್ನಣೆ ಪಡೆದಿರುವಿರಿ. ಈ ವರೆಗೆ ಆದಾವ ಕಲೆಕ್ಟರರೂ ನಿಮ್ಮಷ್ಟು ಮನ್ನಣೆ ಪಡೆದವರಿಲ್ಲ.

ಕಲೆಕ್ಟರ್:— "ಎಲ್ಲವೂ ತಮ್ಮ ಅನುಗ್ರಹದಿಂದಲೂ, ಉಪದೇಶದಿಂದಲೂ ದೊರೆತವು. ಆ ಗೌರವ ನಿಮಗೇ ಸಲ್ಲಬೇಕಾದುದು. ತಮ್ಮ ಪತ್ರಿಕೆ ಚೆನ್ನಾಗಿ ನಡೆಯುತ್ತಿದೆಯೇ?"

ಸಂಪಾದಕರು:-- ಈಚೆಗೆ ಚಂದಾದಾರರು ವಿಪರೀತ ಹೆಚ್ಚಿರುವರು. ನಾನೀಗ ಕೊಂಚಕಾಲ ದಕ್ಷಿಣ ಭಾರತದ ಕಡೆಗೆ ಪ್ರವಾಸ ಹೋಗಿಬರ

ಬೇಕೆಂದಿದ್ದೇನೆ. ಮುಂದಿನ ಐದನೇಯ ತಾರೀಖು ಹೊರಡಬೇಕೆಂದಿರುವೆನು.. ಅದನ್ನು ಕುರಿತೇ ತಮ್ಮ ಸಂಗಡ ಕೊಂಚಮಾತನಾಡಬೇಕೆಂದು ಬಂದೆ."

ಕಲೆಕ್ಟರ್, "ಓಹೋ, ಪ್ರಯಾಣ ಗೊತ್ತು ಮಾಡಿ ಬಿಟ್ಟಿರಾ. " ಎಂದನ್ನುತ್ತ ಗೋಡೆಯಲ್ಲಿದ್ದ ಎಲೆಕ್ಟ್ರಿಕ್ ಗುಂಡಿಯೊಂದನ್ನು ಒತ್ತಿದರು ಮರುಘಳಿಗೆ ಅಡಿಗೆಯವನು ಬಂದು ನಿಂತ.

ಕಲೆಕ್ಟರ್ "ಒಂದು ಲೋಟ ಹಾಲೂ, ಕೊಂಚ ಹಣ್ಣೂ ತಾ" ಎನಲು, ಅಡಿಗೆಯವನು ಹೊರಟು ಹೋದನು.

ಸಂಪಾದಕರು "ನಾನು ದಕ್ಷಿಣ ಭಾರತದಲ್ಲಿನ ಹಲವು ಸಂಘಗಳನ್ನೂ, ಸಂಸ್ಥೆಗಳನ್ನೂ ನೋಡಬೇಕೆಂದಿದ್ದೇನೆ. ಮುಖ್ಯವಾಗಿ ಪತ್ರಿಕೆಗಳಲ್ಲಿ ಪದೇ ಪದೇ ಬರುತ್ತಿರುವ ಸರಸ್ವತೀ ಸಂಘವನ್ನೂ, ಸರಸ್ವತೀ ಆಶ್ರಮವನ್ನೂ ಕಂಡು ಬರಬೇಕೆಂಬ ಆಸೆ. ಆ ಸಂಘವು ಪ್ರಾರಂಭವಾಗಿ ಐದು ವರ್ಷ ವಾಗಿರಬಹುದು. ಅಷ್ಟರೊಳಗೆ ಅದನ್ನು ಸ್ಥಾಪಿಸಿದ ರಮಣಿಯ ಪ್ರಯತ್ನದಿಂದ ಆ ಸಂಘವು ಒಳ್ಳೇ ರೀತಿಯಲ್ಲಿ ಅಭಿವೃದ್ಧಿ ಹೊಂದಿ ಜನರಿಗೆ.... ಮುಖ್ಯವಾಗಿ ಅಬಲೆಯರಿಗೂ ಅನಾಥರಿಗೂ ಬಹಳ ಉಪಯೋಗಕರವಾದ ಸೇವೆಯನ್ನು ಮಾಡುತ್ತಿದೆಯಂತೆ. ಓರ್ವ ಸ್ತ್ರೀಯು ಸಂಘಟನಾ ಕಾರ್ಯದಲ್ಲಿ ಇಷ್ಟು ಮುಂದರಿದಿರುವುದು ಬಹಳ ಆಶ್ಚರ್ಯವಾದ ಸಂಗತಿಯಲ್ಲವೇ ? "

ಕಲೆಕ್ಟರ್ 'ಹೌದು'' ಎಂಬುದಾಗಿ ತಲೆತೂಗಿದರು. ಬಳಿಕ "ಮಿಸ್ಟರ್ ಶರ್ಮಾ, ತಾವು ಮದರಾಸಿಗೆ ಹೋಗುವವೇಳೆಗೆ, ಬಹುಶಃ ನಾನೂ ಅಲ್ಲಿಗೆ ಬಂದಿರಬಹುದು. ರಜ ಕೇಳಿರುವೆನು. ನನ್ನ ತಂಗಿಯ ಯಜಮಾನರ ವಿಳಾಸವನ್ನು ಬರೆದುಕೊಡುತ್ತೇನೆ. ಖಂಡಿತ ತಾವೂ ಅವರ ಮನೆಯಲ್ಲೇ ಬಂದಿಳಿಯಬೇಕು. ಇಬ್ಬರೂ ಜೊತೆಯಾಗಿ ಸರಸ್ವತೀ ಸಂಘವನ್ನು ನೋಡಿಬಂದರಾಯಿತು" ಇದನ್ನು ಹೇಳುತ್ತಾ ನೋಟು ಪುಸ್ತಕದಿಂದ ಕಾಗದ ತುಂಡೊಂದನ್ನೂ, ಲೇಖನಿಯನ್ನೂ ತೆಗೆದು ತನ್ನ ತಂಗಿಯ ವಿಳಾಸವನ್ನು ಬರೆದುಕೊಟ್ಟರು.

ಶರ್ಮಾ "ಬಹಳ ಥ್ಯಾಂಕ್ಸ್. ಮದರಾಸಿನಲ್ಲಿ ನಿಮ್ಮ ತಂಗಿಯ ಯಜಮಾನರನ್ನು ನೋಡಿಬರೋಣವೆಂದೇ ಅವರ ವಿಳಾಸ ಕೇಳಲು ನಾನು

ಬಂದದ್ದು. ತಾವೀಗ ಅವಸರದಲ್ಲಿ ರಜ ಕೇಳಿರುವುದೇಕೆ? ಮದುವೆ ಏನಾದರೂ ನಿಶ್ಚಯ್ತೆ........? ”

ಅಷ್ಟರೊಳಗಾಗಿ ಅಡಿಗೆಯವನು ಹಾಲು, ಹಣ್ಣು ತಂದಿಟ್ಟು ಹೋಗಲು, ಕಲೆಕ್ಟರ್ ಮುಖಸಿಂಡರಿಸಿಕೊಂಡು “ ಛೇ, ಛೇ, ಅಂತಹು ದೇನೂ ಇಲ್ಲ. ನನ್ನ ತಂಗಿಗೆ ಮೈ ಇಳಿದುಹೋಗಿ ಹಾಸಿಗೆ ಹಿಡಿದು ಮಲ ಗಿದ್ದಾಳೆ. ಇದೇ ತಾನೇ ಗುಣಮುಖ ಹೊಂದುತ್ತಿರುವಳಂತೆ. ಹತ್ತು ಹದಿ ನೈದು ದಿನ ರಜ ತೆಗೆದುಕೊಂಡೇ ಹೋದರೆ ತಂಗಿಯನ್ನೂ ನೋಡಿ ಕೊಂಡು, ತಾಯಿತಂದೆಯರನ್ನೂ ನೋಡಿಬರೋಣವೆಂಬ ಚಪಲ. ''

ಶರ್ಮಾ “ ಬಹಳ ಸಂತೋಷ. ಮಳೆ ನಿಂತಂತಿದೆ. ನಾನು ಹೊರಡಲೇ ? ”

ಕಲೆಕ್ಟರ್ “ ಸ್ವಲ್ಪದಾಹಶಾಂತಿಮಾಡಿಕೊಂಡು ಹೊರಡಬಹುದು. ಹಣ್ಣಂತೂ ಮುಟ್ಟಲೇ ಇಲ್ಲ. ಹಾಲನ್ನಾದರೂ ತೆಗೆದುಕೊಳ್ಳಬೇಕು ” ಎಂದು ಉಪಚರಿಸಿದ. ಶರ್ಮಾ ಹಾಲು ಕುಡಿದು, ಬಟ್ಟಲನ್ನಿಟ್ಟು ಕಲೆಕ್ಟರ ಹತ್ತಿರ ಅಪ್ಪಣೆ ಪಡೆದು ಹೊರಟುಹೋದರು. ಕಲೆಕ್ಟರ್ ರಾಜಗೋಪಾಲ್ ವಿಲಾಯತಿಗೆ ತೆರಳಿದ ಅಂಬಿಯೇ ಹೌದು. ವಿಲಾಯಿತಿಗೆ ತೆರಳಿದ ಅಂಬಿ ಐ. ಸಿ. ಎಸ್. ಪಾಸ್‌ಮಾಡಿಕೊಂಡು ಜನ್ಮಭೂಮಿಗೆ ಹಿಂದಿರುಗಿ ದನು. ಅವನೀಗ ದೆಹಲಿಯಲ್ಲಿ ಕಲೆಕ್ಟರ್ ಪದವಿಯಲ್ಲಿದ್ದನು. ನಿರಾಶ್ರಿತ ಶಿಬಿರದಲ್ಲಿ ಅವನನ್ನು ಸ್ಪೆಷಲ್ ಡ್ಯೂಟೀಗೆ ನೇಮಿಸಿದ್ದರು. ಅವನ ಪರಿಶ್ರಮ ವನ್ನೂ, ಕಾರ್ಯದ ದಕ್ಷತೆಯನ್ನೂ ಕಂಡು ಮಂತ್ರಿಗಳೇ ಆದಿಯಾಗಿ ಸಕ ಲರೂ ಹೊಗಳುತ್ತಿದ್ದರು.

ವಿಜಯಳಿಗೆ ಈಗ ಮದುವೆಯಾಗಿ ಗಂಡು ಮಗುವಿನ ತಾಯಿಯಾ ಗಿದ್ದಳು. ಅವಳ ಗಂಡ ಮದರಾಸಿನ ಸುಪ್ರಸಿದ್ಧ ವಿಮಾಕಂಪೆನಿಯೊಂದ ರಲ್ಲಿ ಒಳ್ಳೆಯದೊಂದು ಉದ್ಯೋಗದಲ್ಲಿರುವ ಸುಬ್ಬಹ್ಮಣ್ಯಂ ಎಂಬುವರು,

ವಿಜಯಳನ್ನು ಎರಡನೇಯ ಪ್ರಸವಕ್ಕಾಗಿ ಸೇಲಂಗೆ ಕರೆದುಕೊಂಡು ಹೋಗಬೇಕೆಂದು ಅವಳ ತಾಯಿ ತಂದೆಯರು ಮದರಾಸಿಗೆ ಬಂದರು. ಆ ಸಮಯ ವಿಜಯಳಿಗೆ ಹಠಾತ್ತನೆ ಮೈ ಇಳಿದು ಹೋಗಲು (ಅಬಾರ್ಷನ್) ಅವಳನ್ನು ಆಸ್ಪತ್ರೆಯಲ್ಲಿಡಬೇಕಾದ ಸಂದರ್ಭ ಒದಗಿತು. ವಿಜಯ, ಮದ

ರಾಸಿನ ಹೆರಿಗೇ ಆಸ್ಪತ್ರೆಯೊಂದರಲ್ಲಿ ಒಂದೂವರೆ ತಿಂಗಳ ಕಾಲ ಮಲಗಿದ್ದಳು. ಆ ಆಸ್ಪತ್ರೆಯ ದೊಡ್ಡ ಲೇಡೀ ಡಾಕ್ಟರ್ ಕೊಂಚ ಮುಂಗೋಪಿಯಲ್ಲದೆ ಗರ್ವಿಯೂ ಹೌದು. ಕರುಣೆಯೂ, ತಾಳ್ಮೆಯೂ, ಶಾಂತವೇ ಮೂರ್ತಿವತ್ತಾದ ಪ್ರೇಮಮಯಿ ಡಾಕ್ಟರ್ ಸುಧಾ ಎಂಬಾಕೆಯು ಅವಳ ಕೈಕೆಳಗಿನ ಡಾಕ್ಟರ್. ರೋಗಿಗಳೆಲ್ಲರೂ ಯಾವಾಗಲೂ ಡಾಕ್ಟರ್ ಸುಧಳ ಹತ್ತಿರವೇ ತಮ್ಮ ಕಷ್ಟಗಳನ್ನು ನಿರ್ಭಯವಾಗಿ ತಿಳಿಸಿ ಸಹಾಯ ಪಡೆಯುತ್ತಿದ್ದರು. ಆಕೆಯ ಕೈರಾಶಿಯೂ ಒಳ್ಳೆಯದು.

ಡಾಕ್ಟರ್ ಸುಧಾಳೇ ವಿಜಯಳ ಖಾಯಿಲೆಯನ್ನೂ ಗುಣಮಾಡಿದವಳು. ಈ ಕಾರಣದಿಂದ ವಿಜಯಳ ಕುಟುಂಬದವರಿಂದ ಅತಿಯಾಗಿ ಗೌರವಿಸಲ್ಪಟ್ಟಳು ವಿಜಯಳನ್ನು ಆಸ್ಪತ್ರೆಯಿಂದ ಮನೆಗೆ ಕರೆತಂದಬಳಿಕ, ಹತ್ತು ದಿನಗಳ ಕಾಲ ಡಾಕ್ಟರ್ ಸುಧಾ ದಿನವಹಿ ಅವರ ಮನೆಗೆ ಬಂದು ವಿಜಯಳ ಆರೋಗ್ಯವನ್ನು ಪರೀಕ್ಷಿಸಿ, ನೋಡಿಕೊಂಡು ಹೋಗುತ್ತಿದ್ದಳು.

೧೫

ಮದರಾಸಿನ ತ್ಯಾಗರಾಯನಗರದಲ್ಲಿ ಸಣ್ಣದೊಂದು ಬಂಗಲೆ. ಬಂಗಲೆಯ ಮುಂಭಾಗದಲ್ಲಿ ಮನೋಹರವಾದೊಂದು ಪುಷ್ಪವನ. ಒಂದು ಗಂಡುಮಗು ದಾದಿಯ ಸಹಿತ ಆಟವಾಡುತ್ತಿತ್ತು. ಸಂಜೆಯ ಸಮಯ. ಆದೇ ತಾನೇ ಬಂಗಲೆಯ ಮುಂಭಾಗದಲ್ಲಿ ಬಂದು ನಿಂತ ಕಾರಿನಿಂದ ಯುವಕನೋರ್ವನು ಇಳಿಯಲಾಗಿ, ಆಟವಾಡುತ್ತಿದ್ದ ಮಗು " ಮಾವ ಬಂದ, ಮಾವ " ಎಂದನ್ನುತ್ತಾ ಓಡಿಬಂದು ಆ ಯುವಕನನ್ನು ತಬ್ಬಿಕೊಂಡಿತು.

ಮಗುವಿನ ಸಹಿತ ಒಳಗೆ ಬಂದ ರಾಜಗೋಪಾಲ್ ಬಿಳಿಚಿಕೊಂಡು ಹಾಸಿಗೆಯಲ್ಲಿ ಮಲಗಿದ್ದ ತಂಗಿಯನ್ನು ಕಂಡು " ವಿಜಯಾ! ಇದೇನೇ, ಹೀಗಾಗಿ ಬಿಟ್ಟೆ! ಅಮ್ಮ ಎಲ್ಲಿ? " ಎಂದು ಕೇಳಿದನು.

ಅದೇ ತಾನೇ ಅಲ್ಲಿಗೆ ಬಂದ ಸರಸ್ವತಮ್ಮ "ಬಾರೋ ಅಂಬಿ. ಅವಳನ್ನು ಈಗ ನೋಡಿ ಹೀಗನ್ನುವೆ! ಆಸ್ಪತ್ರೆಯಲ್ಲಿದ್ದಾಗ ನೀನು ನೋಡಿರಬೇಕು. ಬಹು ಮೋಸವಾಗಿದ್ದಳು. ಆ ಪುಣ್ಯವತಿ ಡಾಕ್ಟರ್ ಸುಧಾ ಇವಳನ್ನು

ಬದುಕಿಸಿದಳು" ಎಂದಳು "ವಿಜಯ ಆಗ ನ್ಯೂಮೋನಿಯಾದಿಂದ ಮಲಗಿದ್ದಾಗ ಆ ಹುಡುಗಿ ಲಕ್ಷ್ಮಿ ಉತ್ಸಾಹ ಪಡಿಸುತ್ತಿದ್ದಳು. ಈಗ ಇವಳಿಗೆ ಜೊತೆಗಿರಲು ಇನ್ಯಾವ ಲಕ್ಷ್ಮಿಯನ್ನು ಕರೆತರುವುದು?" ಎಂದಂದನು ಅಂಬಿ.

ಅವನು ಇದನ್ನು ಸುಮ್ಮನೆ ಮಾತಿಗೆ ಹೇಳಿದನಷ್ಟೇ.? ಆದರೂ ಆ ಮಾತು, ಇಷ್ಟೊಂದು ಕಾಲವಾಗಿ ಸರಸ್ವತಮ್ಮನನ್ನು ಒಳಗೊಳಗೇ ಕೊರೆಯುತ್ತಿದ್ದ ಚಿಂತೆಯೊಂದನ್ನು ಕೆಣಕಿದಂತಿತ್ತು. ಅವಳ ಕಣ್ಣುಗಳಿಂದ ಗಳಗಳನೆ ನೀರು ಸುರಿಯಿತು.

ವಿಜಯಳ ಮುಖದಲ್ಲಿ 'ಲಕ್ಷ್ಮಿ'ಯೆಂಬ ಮಾತು ಕೇಳಿದೊಡನೆಯೇ ಒಂದು ರೀತಿಯ ಮಂದಹಾಸದ ಆಶೆ ಮೂಡಿತು. ಸರಸ್ವತಮ್ಮ, "ಇದೇ ಆ ಮಗುವನ್ನು ಗೋಳುಯ್ದುಕೊಂಡುದರ ಫಲ, ಈಗ ನಮ್ಮ ಮಗುವನ್ನು ಕಾಡಿಸುತ್ತಿದೆ. ನಿಮ್ಮ ತಂದೆಯಂತೂ ಅಂತಸ್ತು, ಗೌರವ, ಪದವಿಯೆಂದು ಕುಣಿದರು. ಮನುಷ್ಯರ ಸದ್ಗುಣದ, ಸದಾಚಾರದ ಎದುರಿಗೆ ಹಣ, ಅಂತಸ್ತು ಇದೆಲ್ಲ ಏತರವು? ಎಲ್ಲ ನಮ್ಮ ಅಜ್ಞಾನ ಮತ್ತು ಅಸೂಯೆಯೇ ಕಾರಣ. ಅಳಿಯಂದಿರು ಸಹ ಪರಿಹಾಸ್ಯ ಮಾಡುತ್ತಾರೆ" ಎಂದಳು ಗದ್ಗದ ಸ್ವರದಲ್ಲಿ.

"ವಿಜಯ ತಮಾಷೆಗಾಗಿ ಹೇಳಿದ ಕುಚೇಷ್ಟೆಯ ಮಾತು ಇಷ್ಟೊಂದು ಪ್ರಮಾದಕ್ಕಿಟ್ಟುಕೊಳ್ಳಬೇಕೆ? ಬಹುಶಃ ನಿಜವಾಗಿಯೂ ಅಂಬಿ ಆ ಹುಡುಗಿಯನ್ನು ಮದುವೆಯಾಗಬೇಕೆಂದು ಇಷ್ಟಪಟ್ಟಿದ್ದರೆ ಲಕ್ಷಣವಾಗಿ ಮದುವೆ ಮಾಡಿರಬೇಕಿತ್ತು. ಆ ಹುಡುಗಿಯ ಮನೆತನದವರು ಶ್ರೀಮಂತರಲ್ಲದಿದ್ದರೂ ಜಾಣ್ಮೆಯಲ್ಲೂ, ವಿದ್ಯೆಯಲ್ಲೂ ಹಿಂದುಳಿದವರಲ್ಲವಲ್ಲಾ. ಹುಡುಗಿಯೂ ನೋಡಲು ಲಕ್ಷಣವಾಗಿದ್ದಳು 'ಅತಿ ಜಾಣೆ, ಓದಿದ ಹುಡುಗಿ' ಎಂದೆಲ್ಲ ಹಂಗಿಸಿದೆವು. ಅವಳನ್ನು ಅಂಬಿಗೆ ಮದುವೆ ಮಾಡಬಾರದಿತ್ತೆ? ಅವನೂ ಅವಳನ್ನು ಪ್ರೀತಿಸುತ್ತಿದ್ದ. ಬಹುಶಃ ಅವನು ಹೇಳದೇ ಕೇಳದೇ ಇಂಗ್ಲೆಂಡಿನಿಂದ ಒಂದು ಬಿಳಿ ಹುಡುಗಿಯನ್ನು ಕಟ್ಟಿಕೊಂಡು ಬಂದಿದ್ದರೆ ಆಗ ನೀವೇನು ಮಾಡುತ್ತಿದ್ದಿರಿ?" ಎಂದು ಸರಸ್ವತಮ್ಮ ಪೇಚಾಡಿಕೊಂಡು ಕಣ್ಣೀರಿಟ್ಟಳು.

ಅಂಬಿ ಆದೇ ತಾನೇ ಏರೋಡ್ರೋಮದಿಂದ ಬಂದಿಳಿದವನು, ಇನ್ನೂ ಕಾಫೀ ಸಹ ಕುಡಿದಿರಲಿಲ್ಲ. ಇದು ನೆನಪಿಗೆ ಬರಲು ಸರಸ್ವತಮ್ಮ ಮಾತು ಬದಲಾಯಿಸಿದಳು. ಅಂಬಿಯ ಕೈಯಲ್ಲಿದ್ದ ಮಗು ಮುರಳಿಗೆ ಇವರ ಮಾತು ಬೇಜಾರಾಯಿತು. ತನ್ನ ಪುಟ್ಟ ಕೈಯಿಂದ ಮಾವನ ಗಲ್ಲ ಹಿಡಿದು ತನ್ನ ಕಡೆಗೆ ತಿರುಗಿಸಿ, "ಮಾವಾ, ಮಾವಾ, ಚಾಕೇಟ್ ಎಲ್ಲಿ? ಡಾಕರ್ ಮಾಮೀ ಕೂಡ ನಂಗೆ ಚಾಕೇಟ್ ಕೊತ್ತಾರೆ'' ಎಂದು ಮುದ್ದು ಮುದ್ದಾಗಿ ತೊಡಲ್ನುಡಿ ನುಡಿದನು.

ಅಂಬಿ ಮಗುವನ್ನು ಕೆಳಗಿಳಿಸಿ, ಆಳು ತಂದಿಟ್ಟ ತನ್ನ ಕೈಪೆಟ್ಟಿಗೆಯನ್ನು ತೆರೆದು, "ಇಗೋ ನಿನಗೆ ಚಾಕ್ಲೇಟ್, ಫುಟ್‌ಬಾಲ್, ಬ್ಯಾಟ್ ಎಲ್ಲ ತಂದಿದ್ದೇನೆ. ತೆಗೆದುಕೊಂಡು ಹೋಗಿ ಜಾಣನಾಗಿ ಆಡು. ನಾನು ಬಟ್ಟೆ ಬದಲಾಯಿಸಿಕೊಂಡು ಬರುತ್ತೇನೆ'' ಎಂದೆಂದು ಮಗುವಿನ ಕೈಯಲ್ಲಿ ಸಾಮಾನುಗಳನ್ನು ಕೊಟ್ಟು ಅವನನ್ನು ಮುದ್ದಿಟ್ಟನು. ಮಗುವು ಆಟದ ಸಾಮಾನುಗಳನ್ನು ಕಂಡೊಡನೆಯೇ ಆನಂದದಿಂದ ಕುಣಿಯುತ್ತ, "ಆಯಾ, ಆಯಾ" ಎಂದು ಕೂಗುತ್ತ ತೋಟಕ್ಕೆ ಓಡಿಹೋದನು. ಅಂಬಿ ಕುರ್ಚಿಯಲ್ಲಿ ಕುಳಿತು ಅಮ್ಮಾ ಅಳಿಯದೇವರೆಲ್ಲಿ? ಅಪ್ಪನೂ ಕಾಣಲಿಲ್ಲ ವಲ್ಲಾ? ಎಂದು ಕೇಳಿದನು.

ಸರಸ್ವತಮ್ಮ, "ಅಳಿಯದೇವರು ನಿನಗಾಗಿ ಏರೋಡ್ರೋಮಿಗೆ ಕಾರನ್ನು ಕಳುಹಿಸಿ, ತಾವು ಯಾವುದೋ ಅರ್ಜೆಂಟ್ ಕೆಲಸವಿದೆಯೆಂದು ಸೈಕಲಲ್ಲಿ ಹೋದರು. ಅಪ್ಪಾ ತಿರುಗಾಡಿಕೊಂಡು, ಬರುತ್ತಾ ವಿಜಯಳಿಗೆ ಟಾನಿಕ್ ಕೊಂಡು ತರುವದಾಗಿ ಹೇಳಿಹೋದರು. ಇನ್ನೇನು ಬರುವ ಸಮಯ, ಕೊಂಚ ಕಾಫೀ ತರುತ್ತೇನೆ, ತಾಳು" ಎಂದೆಂದು ಅಡಿಗೆಯ ಮನೆಗೆ ಹೊರಟಳು.

ಅಂಬಿಗಂತೂ ತನ್ನ ಮನದ ವ್ಯಾಕುಲತೆಯನ್ನು ಸಮಾಳಿಸಿಕೊಂಡು ಮನಸ್ಸನ್ನು ಸ್ಥಿಮಿತಕ್ಕೆ ತರಲು ಅವಕಾಶ ಬೇಕಿತ್ತು. ಆದುದರಿಂದ "ಅಮ್ಮಾ, ನಾನು ಸ್ನಾನ ಮಾಡಿ ಬಂದು ಕಾಫೀ ಕುಡಿಯುತ್ತೇನೆ'' ಎಂದನು. ಆದರೆ ಸರಸ್ವತಮ್ಮ ಬಿಡಲಿಲ್ಲ, "ಅರ್ಧಹೊಟ್ಟೆ, ಕಾಲುಹೊಟ್ಟೆ ತುಂಬಿಕೊಂಡು ಪ್ಲೇನಿನಲ್ಲಿ ಬಂದಿದ್ದು. ಕಾಫೀ ಕುಡಿದ ಬಳಿಕ ಸ್ನಾನ

ಮಾಡಿದರಾಯಿತು" ಎಂದಂದು ಹೊರಟು ಹೋದರು. ಆ ವೇಳೆಗೆ ಮಗು ಮುರಳಿ ಓಡಿ ಬಂದು ಚಾಕಲೇಟ್ ತಿಂದ ಕೈಯಲ್ಲಿ ಮಾವನನ್ನು ತಬ್ಬಿಕೊಳ್ಳಲು ಥೂ, ತುಂಟ ಹುಡುಗ, ಚಾಕಲೇಟ್ ಕೈಯಿಂದ ನನ್ನ ಡ್ರಿಲ್ ಪ್ಯಾಂಟ ಕೊಳೆ ಮಾಡಿಬಿಟ್ಟೆಯಲ್ಲೋ. ಇನ್ನು ನಿನಗೆ ಚಾಕಲೇಟ್ ಕೊಡೋಲ್ಲ" ಎಂದು ಕೊಳೆಯಾದ ತನ್ನ ಪ್ಯಾಂಟನ್ನು ನೋಡಿಕೊಂಡನು.

ಮಗುವಿಗೆ ಆ ಕೂಡಲೇ ಅಳು ಉಕ್ಕಿಬಂತು, "ನೀನೇ ತುಂಟ, ಮಾವ, ನನ್ನ ಪ್ರೀತೀ, ಡಾಕರ್ ಮಾಮೀನೇ ಒಳ್ಳೇವ್ರು, ನಂಗೆ ಹತ್ತೊ.... ಇಪ್ಪತ್ತೊ.... 'ಚಾಕೇಟ್ ಕೊತ್ತಾರೆ. ನಿಂಗೆ ನಾನು ಕೊಡೋಲ್ಲ ಹೋಗು" ಎಂದಂದು ಅಲ್ಲಿಂದ ಮೆಲ್ಲಗೆ ನಡೆದುಹೋದನು.

ಮಗು ಯಾರನ್ನು ಕುರಿತು ಹೇಳುತ್ತಾನೆಂದು ಅಂಬಿಗೆ ತಿಳಿಯಲಿಲ್ಲ. ವಿಜಯಳನ್ನು ಕುರಿತು, "ಅವನು ಯಾರನ್ನು ಕುರಿತು ಹೇಳುತ್ತಾನೆ? ಮಾಮಿ ಯಾರು?'' ಎಂದು ಕೇಳಿದನು.

ವಿಜಯ "ಡಾಕ್ಟರ್ ಸುಧಾಳನ್ನು ಕುರಿತು ಹೇಳುತ್ತಾನೆ. ಅಣ್ಣಾ, ಅವರು ನನ್ನನ್ನು ನೋಡಲು ಬರುವಾಗಲೆಲ್ಲಾ ಅವನನ್ನು ಮುದ್ದಾಡಿ, ಚಾಕಲೇಟ ಕೊಟ್ಟು ಹೋಗುವರು. ಅವನೆಂದರೆ ಬಲು ಪ್ರೀತಿ."

ಸರಸ್ವತಮ್ಮ ತಿಂಡೀ ತಟ್ಟೆಯನ್ನೂ ಕಾಫೀ ಲೋಟವನ್ನೂ ಮೇಜಿನ ಮೇಲೆ ತಂದಿಟ್ಟು, ಹೌದಪ್ಪ. "ಡಾಕ್ಟರಮ್ಮನಿಗೆ ಮುರಳಿಯೆಂದರೆ ಬಲು ಮುದ್ದು. ಮಾತೆತ್ತಿದರೆ ಅವನು 'ತಾಳು, ತಾಳು; ಡಾಕರ್ ಮಾಮಿಗೇ ಹೇಳಿ ಸೂಜಿ ಚುಚ್ಚಿಸುತ್ತೇನೆ' ಎಂದು ನಮ್ಮನ್ನೆಲ್ಲ ಹೆದರಿಸುತ್ತಾನೆ! ಅವಳ ಬಿಳೀ ಸೀರೆಯನ್ನೂ, ಕಪ್ಪು ಕನ್ನಡಕವನ್ನೂ ಕಂಡರೆ ಮಿಕ್ಕ ಮಕ್ಕಳೆಲ್ಲ ಹೆದರುತ್ತಾರೆ. ಆದರೆ ಮುರಳಿ ಮಾತ್ರ ಅವಳನ್ನು ಕಂಡರೆ ಓಡಿ ಹೋಗಿ ತಬ್ಬಿಕೊಳ್ಳುತ್ತಾನೆ" ಎಂದು ಮೊಮ್ಮಗನ ಪ್ರಭಾವವನ್ನು ಹೊಗಳಲಾರಂಭಿಸಿದಳು.

ಅಂಬಿ ತನ್ನ ತಂಗಿಯ ಹತ್ತಿರಲೂ, ತಾಯ ಹತ್ತಿರಲೂ ಮಾತನಾಡುತ್ತ ಕಾಫೀ ಕುಡಿದು, ಸ್ನಾನಕ್ಕೆ ಹೊರಟನು.

೧೬

ಅಂಬಿ ಮದರಾಸಿಗೆ ಬಂದು ಐದಾರು ದಿನಗಳಾದ ಬಳಿಕ ಸುಪ್ರಸಿದ್ಧ ವೀರಭಾರತೀ ಸಂಪಾದಕರಾದ ಶ್ರೀಮಾನ್ ಶರ್ಮಾರವರು ಮದರಾಸಿಗೆ ಬಂದು ವಿಜಯಳ ಮನೆಯಲ್ಲೇ ಇಳಿದರು. ಅಂಬಿಯೂ, ಮಹಾದೇವನ್ ರವರೂ ವಿಜಯಳ ಗಂಡ ಸುಬ್ರಹ್ಮಣ್ಯಯರವರೂ ಅವರನ್ನು ಬಹಳ ಆದರದಿಂದ ಬರಮಾಡಿಕೊಂಡು ಉಪಚರಿಸುತ್ತಿದ್ದರು. ಹಗಲು ರಾತ್ರೆ ಶರ್ಮಾವನ್ನು ನೋಡಲು ಕೆಲವು ಪತ್ರಿಕೆಗಳ ಸಂಪಾದಕರುಗಳೂ, ಸುದ್ದಿಗಾರರೂ, ಕಾಂಗ್ರೆಸ್‌ನವರೂ, ಕಾಂಗ್ರೆಸೇತರರೂ, ದೇಶಸೇವಕರೂ ಗುಂಪು ಗುಂಪಾಗಿ ಬಂದು ಹೋಗುತ್ತಿದ್ದರು. ಅವರಿಗೆ ನಿಮಿಷ ಮಾತ್ರ ವಿಶ್ರಾಂತಿ ಸಿಗುತ್ತಿರಲಿಲ್ಲ. ನಗರದ ಎಲ್ಲ ಖಾಸಗೀ ಸಂಘ ಸಂಸ್ಥೆಗಳಿಗೆ ಭೇಟಿಯಿತ್ತು ಸೂಕ್ತ ಸಲಹೆ ಸೂಚನೆಗಳನ್ನು ಹೇಳುತ್ತಲಿದ್ದರು.

ಶರ್ಮಾ, ಆ ಹೊತ್ತು ಬೆಳಿಗ್ಗೆ ಔವ್ವೈ ಆಶ್ರಮಕ್ಕೆ ಭೇಟಿಯಿತ್ತು, ಮನೆಗೆ ಹಿಂದಿರುಗುವದರೊಳಗೆ ಘಂಟೆ ಹನ್ನೆರಡು ಹೊಡೆದಿತ್ತು. ಸುಬ್ರಹ್ಮಣ್ಯಂ ಊಟಮಾಡಿ, ಸೈಕಲಲ್ಲಿ ಆಫೀಸಿಗೆ ಹೊರಟು ಹೋಗಿದ್ದರು. ಶರ್ಮಾ ಬಂದಂದಿನಿಂದ ಅವರು ತಮ್ಮ ಕಾರನ್ನು ಅವರ ಉಪಯೋಗಕ್ಕಾಗಿ ಇತ್ತಿದ್ದರು. ಶರ್ಮಾರವರ ಬರುವಿಕೆಯನ್ನು ಕಾಯುತ್ತ ಅಂಬಿಯೂ ಮಹಾದೇವನ್‌ರವರೂ ಊಟ ಸಹ ಮಾಡದೆ ಬೀದಿಯ ವರಾಂಡದಲ್ಲಿ ಕುಳಿತಿದ್ದರು. ಅವರು ಬಂದ ಮೇಲೆ, ಎಲ್ಲರೂ ಊಟಮಾಡಿ ನಡುಮನೆಯಲ್ಲಿ ಮಾತನಾಡುತ್ತ ಕುಳಿತರು. ಆಗ, ಶರ್ಮಾ ಅಂಬಿಯನ್ನು ಕುರಿತು "ಮಿಸ್ಟರ್ ರಾಜಗೋಪಾಲ್, ಈ ಹೊತ್ತು ಮಧ್ಯಾಹ್ನ ಎರಡು ಘಂಟೆಗೆ ಸರಸ್ವತೀ ಸಂಘಕ್ಕೆ ಹೋಗೋಣವೆಂಬ ಉದ್ದೇಶ. ನೀವೂ ಬರುತ್ತೀರಾ?" ಎಂದು ಕೇಳಿ, ಮಹಾದೇವನ್‌ರವರ ಕಡೆಗೆ ತಿರುಗಿ, "ಏನು, ಸಾರ್. ನೀವು ಬರುವಿರಾ?" ಎಂದು ಕೇಳಿದರು.

ಅಯ್ಯರ್— ಅಲ್ಲಿ ಏನು ವಿಶೇಷ?

ಶರ್ಮಾ— ದಿನವಹಿ, ಪತ್ರಿಕೆಗಳಲ್ಲಿ ಅಲ್ಲಿಯ ಸಂಗತಿಗಳು ಬರುತ್ತಿವೆಯಲ್ಲಾ?"

ಐಯ್ಯರ್— 'ಓಹೋ, ಲಲಿತಕಲೆ, ಕಸೂತಿ ಮುಂತಾದ ನಾಜೂಕ ಕೆಲಸಗಳನ್ನೂ, ಶಿಶುಪೋಷಣೆ, 'ನರ್ಸಿಂಗ್' ಮುಂತಾದ ಉಪಯುಕ್ತವಾದ ವಿಷಯಗಳನ್ನೂ ಹೆಣ್ಣುಮಕ್ಕಳಿಗೆ ಕಲಿಸುತ್ತಾರಂತೆ. ಆ ಸಂಘದ ಆಶ್ರಯದಲ್ಲೊಂದು ಅನಾಥ ಅಬಲಾಶ್ರಮವನ್ನೂ ಏರ್ಪಡಿಸಿರುವರಂತೆ, ಗೋಪಾಲಪುರದ ಎಕ್ಸ್‌ಟೆನ್‌ಸನಿಗೆ ಸಮೀಪದಲ್ಲಿ ಒಂದು ಹಳ್ಳಿಯನ್ನು 'ಮಾದರೀ ಗ್ರಾಮ' ವಾಗಿ ತಯಾರು ಮಾಡಿರುವರು. ಅದನ್ನೇ ಅಲ್ಲವೇ ತಾವು ಹೇಳುತ್ತಿರುವುದು ?

ಶರ್ಮಾ 'ಹೌದು, ಅದೇ ಸಂಘವೇ'

ಐಯ್ಯರ್ 'ಈ ಹೊತ್ತು ನೀವಿಬ್ಬರೂ ಹೋಗಿ ಬನ್ನಿ. ನನಗೆ ಮೈ ಸ್ವಸ್ಥವಿಲ್ಲ'

* * * *

ಎರಡು ಘಂಟೆಗೆ ಸರಿಯಾಗಿ ಡ್ರೈವರ್ ಬರಲು ಅಂಬಿಯೂ, ಶ್ರೀಮಾನ್ ಶರ್ಮಾರವರೂ ಸರಸ್ವತೀ ಸಂಘಕ್ಕೆ ಹೊರಟರು. ಅಲ್ಲಿಗೆ ಹೋಗಿ ತಲುಪಿದೊಡನೆಯೇ ಸೇವಕನೊಬ್ಬನು ಬಂದು ಕಾರ ಸಮೀಪದಲ್ಲಿ ವಿನಯಸಂಪನ್ನನಾಗಿ ನಿಂತನು. ಬಂದವರು ಅವನ ಹತ್ತಿರ ಪರಿಚಯದ ಚೀಟಿಗಳನ್ನು ಕೊಡಲು ಅವನು ಆಶ್ರಮದೊಳಗೆ ಓಡಿಹೋದನು.

ಆಫೀಸ್ ರೂಮಿನಲ್ಲಿ ಮೇಜಿನ ಮುಂದೆ ಕುಳಿತು ಏನೋ ಕೆಲಸ ಗಮನಿಸುತ್ತಿದ್ದ ಸಂಘದ ಯಜಮಾನಿಯು ಚೀಟಿಗಳನ್ನು ನೋಡಿ ಸೇವಕನಿಗೆ ಅವರನ್ನು ಕರೆತರುವಂತೆ ಹೇಳಲು, ಅವನು ಮತ್ತೆ ಹೊರಗೆ ಹೋಗಿ ಅವರಿಬ್ಬರನ್ನೂ ಒಳಗೆ ಕರೆತಂದನು. ಅವಳು ಅವರಿಬ್ಬರನ್ನೂ ನೋಡಿ ದಾಕ್ಷಣ ಬೆಚ್ಚಿ ಬಿದ್ದುದರಲ್ಲಿ ಅತಿಶಯವೇನೂ ಇಲ್ಲ. ಮರುಘಳಿಗೆ ಶರ್ಮಾರವರು "ಸೀತಾ! ಸೀತಾ! ನೀನು ಇನ್ನೂ ಜೀವದಿಂದಿರುವೆಯಾ?" ಎಂದು ನಾಲಿಗೆ ತೊದಲುತ್ತ ಕೇಳಿದರು.

ಆ ಹೆಂಗಸು, "ದೇವಾ" ಎಂದವರ ಪಾದಗಳಲ್ಲಿ ಬಿದ್ದು ನಮಸ್ಕರಿಸಿದಳು.

ರಾಜಗೋಪಾಲನು ಒಂದು ರೀತಿಯಾಗಿ ಸಮಾಧಾನಿಸಿಕೊಂಡು "ಮಾಮೀ! ಲಕ್ಷ್ಮಿ ಎಲ್ಲಿ?" ಎಂದು ಕೇಳಿದ. ಅದೇ ಸಮಯ ಕಪು

ಕನ್ನಡಕವೂ, ಬಿಳೀ ಸೀರೆಯೂ ಧರಿಸಿ "ಟಕ್, ಟಕ್, ಎಂದು ನಡೆದು ಬಂದ ಲಕ್ಷ್ಮಿ, "ಅಮ್ಮಾ, ಆಶ್ರಮದ ತೋಟದಿಂದ ಲಿಂಗ ಬುಟ್ಟಿ ತುಂಬ ಗುಲಾಬಿ ಹೂಗಳನ್ನು ಕೊಯ್ದು ತಂದ. ಈ ಹೊತ್ತು ರೋಜ ಮಾಲೆ ಕಟ್ಟುವುದರಲ್ಲಿ ಕಳೆಯಿತು. ಎಷ್ಟು ಚೆನ್ನಾಗಿದೆ, ನೋಡು !" ಎನ್ನುತ್ತಾ ಒಳನುಗ್ಗಿದವಳು ಇದಿರಲ್ಲಿ ಇಬ್ಬರು ಗಂಡುಸರು ಇರುವುದನ್ನು ಕಂಡು ಹಾರಗಳನ್ನು ತಾಯಿಯ ಮೇಜಿನ ಮೇಲಿಟ್ಟು, ಸುಮ್ಮನೆ ನಿಂತಳು. ಕೂಡಲೇ ಸೀತಮ್ಮ, "ಸುಧಾ, ಇಗೋ ಅಂದು ಮಾಯವಾದ ನಿನ್ನ ತಂದೆ! ವಿಲಾಯತಿಗೆ ಹೋದ ಅಂಬಿಯವರೂ ಬಂದಿರುವರು ನೋಡು" ಎಂದಳು.

ಲಕ್ಷ್ಮಿಗೆ ಅತ್ಯಾಶ್ಚರ್ಯವಾಯಿತು. ಇಬ್ಬರಿಗೂ ಕೈಮುಗಿದಳು. ಅತ್ಯಾನಂದದೊಡನೆ ಮಗಳನ್ನೂ, ಹೆಂಡತಿಯನ್ನೂ ಮನದಣೀ ನೋಡಿ ಶರ್ಮಾ "ಸೀತಾ, ನೀನು ಸತ್ತು ಹೋದೆಯೆಂದು ಮಾಮೀ ಬರೆದುಬಿಟ್ಟಳು. ನಿನ್ನನ್ನೂ, ಮಗುವನ್ನೂ, ನೋಡಿ ಪರಮಾನಂದವಾಯಿತು. ಎಲ್ಲ ದೇವರ ಕೃಪೆ. " ಎಂದರು.

ಸೀತಮ್ಮ. ಮಾಮಿಗೆ ನಿಮ್ಮ ಅಡ್ರೆಸ್ ಹ್ಯಾಗೆ ದೊರೆಕಿತು?

ಶರ್ಮಾ, 'ನಿಮ್ಮನ್ನು ಬಿಟ್ಟು ಅಗಲಿದ ಆರು ತಿಂಗಳ ಬಳಿಕ, ನನಗೆ ದೆಹಲಿಯಲ್ಲಿ ಉದ್ಯೋಗ ಸಿಕ್ಕಿದೆಯೆಂದೂ, ಇನ್ನೂ ಹದಿನೈದು ದಿನಗಳಲ್ಲಿ ರಾಣಿಪೇಟೆಗೆ ಬಂದು ನಿನ್ನನ್ನು ಕರೆದುಕೊಂಡು ಹೋಗುವುದಾಗಿಯೂ ಮಾಮಿಗೆ ಬರೆದಿದ್ದೆ. ಅದಕ್ಕೆ ಮಾಮಿಯಿಂದ ಬಂದ ಉತ್ತರದಲ್ಲಿ, ಮಾವ ಹೋದ ವಿಷಯವನ್ನು ತಿಳಿಸಿ, ನೀನೂ ಕೂಡ ಟೈಫಾಯಿಡ್ ಬಂದು ಸತ್ತು ಹೋದೆಯೆಂದೂ ತನಗೆ ಊಟಕ್ಕೇ ಬಹಳ ತೊಂದರೆಯಾಗಿದೆ ಯೆಂದೂ ಬರೆದಿದ್ದಳು. ಅವಳಿಗೆಂದು ತಿಂಗಳು ತಿಂಗಳು ಇಪ್ಪತ್ತು ರೂಪಾ ಯಿಗಳು ಕಳುಹಿಸುತ್ತಿದ್ದರೆ ಉಚಿತವೆಂದೂ ನಾನು ಸುಮ್ಮನೆ ರೈಲು ಚಾರ್ಜು ಖರ್ಚು ಮಾಡಿಕೊಂಡು ಅಷ್ಟು ದೂರ ಬರಬೇಕಾಗಿಲ್ಲವೆಂದೂ ಬರೆದಳು. ಈ ರೀತಿ ನಾಲ್ಕು ವರ್ಷಗಳು ಕಳೆದನಂತರ ಅವಳೂ ಹೋದ ಳೆಂದು ವರ್ತಮಾನ ಬಂತು.'' ಎಂದರು.

ಆ ಬಳಿಕ ಸೀತಮ್ಮ ತನ್ನ ಗಂಡನಿಗೆ ತಾನು ಅವರನ್ನು ಬಿಟ್ಟು ಅಗಲಿ ದಂದಿನಿಂದ ಈ ವರೆವಿಗೆ ನಡೆದ ಸಂಗತಿಯನ್ನೆಲ್ಲ ವಿವರವಾಗಿ ತಿಳಿಸಿದಳು.

ಅಂಬಿ ಲಕ್ಷ್ಮಿಯನ್ನು ಕುರಿತು, "ಇದೇಕೆ, ಕಪ್ಪುಕನ್ನಡಕ ಹಾಕಿ ಕೊಂಡಿರುವೆ?'' ಎಂದು ಕೇಳಿದನು.

ಲಕ್ಷ್ಮಿ "ಮೂರು ತಿಂಗಳ ಹಿಂದೆ ಬಹಳ ಕಣ್ಣುನೋವಾಗಿತ್ತು ಆಗಿ ನಿಂದ ಕೊಂಚ ಕಾಲ ಈ ಕನ್ನಡಕಧರಿಸಿದ್ದರೆ ಒಳ್ಳೆಯದೆಂದು ನೇತ್ರಜ್ಞರು ಹೇಳಿದರು. ನನ್ನನ್ನು ತಾವೂ, ತಮ್ಮ ಮನೆಯವರೂ ಗುರುತಿಸಬಾರದೆಂದೇ ನನ್ನ ಹೆಸರನ್ನೂ ಸಹ ಬದಲಾಯಿಸಿದೆ. ಕನ್ನಡಕ ಧರಿಸಿದ ನನ್ನನ್ನೂ ನಿಮ್ಮ ಮನೆಯವರು ಗುರುತಿಸಿದಿರುವುದಕ್ಕೆ ಇದು ನೆರವಾಯಿತು" ಎಂದು ತುಂಟ ನಗೆ ನಕ್ಕಳು.

ಅಂಬಿ "ನಾನು ಆವಾಗಲೇ ನಿನ್ನ ಕನ್ನಡಕವನ್ನು ನೋಡಿದಾಕ್ಷಣ ನಿಂದೇ ಡಾಕ್ಟರ್ ಸುಧಾವಾಗಿರಬೇಕೆಂದು ಸಂಶಯಿಸಿದೆ. ತಮಾಷೆ ಇರಲಿ. ಹೆಸರನ್ನೇಕೆ ಬದಲಾಯಿಸಿಕೊಂಡೆ?" ಎಂದು ಕೇಳಿ, ಶರ್ಮಾರವರ ಕಡೆಗೆ ತಿರುಗಿ "ನನ್ನ ತಂಗಿಗೆ ಎರಡನೇಯ ಸಲ ಜೀವದಾನಮಾಡಿ ಕಾಪಾಡಿತ ಪುಣ್ಯಾತ್ಮಳು ನಿಮ್ಮ ಮಗಳು, ಸಾರ್!!" ಎಂದನು.

ಲಕ್ಷ್ಮೀ "ಲಕ್ಷ್ಮಮ್ಮಾ ಮಾಮೀಯುವರು' 'ನನ್ನ ಹೆಸರನ್ನಿಟ್ಟು ಕೊಂಡು ನಿನ್ನನ್ನುದುರ ದೃಷ್ಟಪೀಡಿಸುತ್ತಿದೆ. ಹೆಸರನ್ನಾದರೂ ಬದಲಾ ಯಿಸಿಕೋ ತಾಯೀ " ಅದೃಷ್ಟ ತಿರುಗಲಿ ' ಎಂದು ಒತ್ತಾಯ ಮಾಡಿ ದರು. ಅದೇ ಸುಧಾ ಎಂಬ ಹೆಸರನ್ನಿಟ್ಟುಕೊಂಡೆ.

ಶರ್ಮಾ " ಸೀತಾ, ಮಗು ಏನು ಮಾಡುತ್ತಿದ್ದಾಳೆ? ಸೀತಮ್ಮ" ಏನೋ ಕಷ್ಟಪಟ್ಟು ಡಾಕ್ಟರಿಗೆ ಓದಿಸಿದೆ. ಮಗುವೂ ಸಹ ಚೆನ್ನಾಗಿ ಓದಿ ಹೆಸರುಗಳಿಸಿ ಅಸಿಸ್ಟೆಂಟ್ ಲೇಡೀ ಡಾಕ್ಟರಾಗಿದ್ದಾಳೆ'' ಎಂದು ಹೇಳು ವಾಗ ತಡೆಯಲಾರದೆ ಕಂಬನಿಗಳುದಿರಿದವು.

ಶರ್ಮಾ, ನಸುನಗುತ್ತ, " ಯಾಕೆ ದುಃಖಿಸುತ್ತೀ? ಇಗೋ ಕೈ ಸಂಗಡ ಅಳಿಯನನ್ನು ಕರೆತಂದಿದ್ದೇನೆ " ಎಂದವರೇ ತಪ್ಪು ನುಡಿದ ವರಂತೆ ಹೆದರಿ ಅಂಬಿಯ ಕಡೆಗೆ ನೋಡಿದರು. ಆ ಮಾತು ಕೇಳಿ ಅಂಬಿ ಅಚ್ಚರಿಗೊಂಡನು. ತನ್ನ ಮನಸ್ಸನ್ನು ಶರ್ಮಾ ತಿಳಿದ ಬಗೆಹೇಗೆ ಎಂಬುದೇ ಅವನ ಆಶ್ಚರ್ಯಕ್ಕೆ ಕಾರಣ. ತನ್ನ ಬಯಕೆ ಈಡೇರುವ ಸಮಯ ಸಮೀಪಿಸಿತೆಂಬ ಆನಂದದ ಭರದಲ್ಲಿ ಮೇಜಿನಮೇಲಿದ್ದ ಪುಷ್ಪ

ಹಾರಗಳಲ್ಲಿ ಒಂದನ್ನು ತೆಗೆದು ಲಕ್ಷ್ಮಿಯ ಕೊರಳಲ್ಲಿ ಹಾಕಿಯೇಬಿಟ್ಟನು!!! ಸೀತಮ್ಮನಿಗೂ, ಶರ್ಮಾಗೂ ಏರ್ಪಟ್ಟ ಆನಂದಕ್ಕೆ ಮಿತಿಯೇ ಇಲ್ಲ. ಶರ್ಮಾ, ಮತ್ತೊಂದು ಹಾರವನ್ನು ತೆಗೆದು ಮಗಳ ಕೈಗಿತ್ತು "ಅವರ ಕೊರಳಲ್ಲಿ ಹಾಕುತಾಯಿ" ಎಂದರು. ಲಕ್ಷ್ಮಿ ನಾಚಿಕೆಯಿಂದ ಮುಖ ಕೆಂಪಾಗಲು ಒನಪು ಒಯ್ಯಾರದೊಡನೆ ಪುಷ್ಪಹಾರವನ್ನು ತನ್ನ ಪ್ರಿಯನ ಕೊರಳಲ್ಲಿ ಹಾಕಿದಳು. ಆ ಕೂಡಲೇ ದಂಪತಿಗಳು ಹಿರಿಯರಿಬ್ಬರಿಗೆ ಸಾಷ್ಟಾಂಗವಾಗಿ ಮಣಿದಿದ್ದರು. ಹಿರಿಯರಿಬ್ಬರೂ ದೇವರನ್ನು ಪ್ರಾರ್ಥಿಸುತ್ತ ಮಕ್ಕಳಿಬ್ಬರನ್ನೂ ಹರಸಿದರು. ಆ ಮಕ್ಕಳಿಬ್ಬರ ಅಗಲಿಕೆಗೆ ಕಾರಣವಾಗಿದ್ದ ಅದೇ ಪುಷ್ಪಹಾರವು ಮತ್ತೆ ಅವರಿಬ್ಬರನ್ನೂ ಕೂಡಿಸಿ ಆನಂದ ಸಾಗರದಲ್ಲಿ ತೇಲಿಸಿತು.

---

## ಅನಂತ ಗ್ರಂಥಮಾಲಾ, ಹುಬ್ಬಳ್ಳಿ

# ಹೂ ಅರಳಿತು

( ಉತ್ತಮ ತೆಲಗು ಕತೆಗಳ ಸಂಗ್ರಹ ರೂ. ೨—೪- ೦)

● ಕೆಲವೇ ಪ್ರತಿಗಳು ಉಳಿದಿವೆ.

● ಏಜೆಂಟರಿಗೆ ಧಾರಾಳವಾದ ಕಮಿಷನ್.

● ಪ್ರತಿಗಳಿಗೆ ಬೇಗ ಬರೆಯಿರಿ.

## ಅಭಿಪ್ರಾಯಗಳು

"........**ಹೂ ಅರಳಿತು**....ಎಂಬ ಕಥಾಸಂಗ್ರಹದಲ್ಲಿ ನಮ್ಮ ನೆರೆ ಪ್ರಾಂತದ ಜೀವನ ಚಿತ್ರಗಳನ್ನು, ಲೇಖನರತ್ನಗಳನ್ನು, ಆರಿಸಿ, ಭಾಷಾಂತ ರಿಸಿ ಸಾಹಿತ್ಯ ಸೇವೆಯ ಉದ್ದೇಶದಿಂದ ಮೂಲ ಲೇಖಕರ ಪ್ರತಿಭೆ ಪರಿಚ ಯಗಳನ್ನು ಮಾಡಿಕೊಟ್ಟಿರುವ ಶ್ರೀ. ವೆಂಕೋಬಾಚಾರ್ಯರ ಕಾರ್ಯ ಶ್ಲಾಘನೀಯ. ಇಂತಹ ಗ್ರಂಥಗಳು ಹೆಚ್ಚೆಚ್ಚು ಬರಲೆಂದು ಹಾರೈ ಸುತ್ತೇವೆ."

'ಉಷಾ'

" ....**ಹೂ ಅರಳಿತು** ಎಂಬ ಕಥಾಸಂಕಲನದಲ್ಲಿಯ ವಿವಿಧ ಆಂಧ್ರ ಕತೆಗಳಲ್ಲಿ ಗೆಳೆಯ ಶ್ರೀ ವೆಂಕೋಬಾಚಾರ್ಯರ ಅನುವಾದ ಕೌಶಲ್ಯ ವನ್ನು ಕಾಣಬಹುದಾಗಿದೆ........ 'ಹೂ ಅರಳಿತು, ಎಂಬ ಕಾವ್ಯಾತ್ಮಕ ಗದ್ಯದ ಕತೆ ಉದ್ಬೋಧಕವಾಗಿರುವ ಸನ್ನಿವೇಶಗಳಿಂದ ಕೂಡಿದೆ ಈ ಕಥಾ ಸಂಗ್ರಹವನ್ನು ಕನ್ನಡಿಗರು ಓದಿ ಸವಿಯಬೇಕೆಂದೂ, ಆ ಮೂಲಕ ಆಂಧ್ರ ಸಾಹಿತ್ಯದ, ಹಾಗೂ ಆಂಧ್ರ ಸಾಹಿತಿಗಳ ಪರಿಚಯ ಪಡೆಯ ಬೇಕೆಂದೂ ಸೂಚಿಸದೇ ಇರಲಾರೆವು."

" ಜಯಹಿಂದ"

" ಶ್ರೀ ವೆಂಕೋಬಾಚಾರ್ಯರು ತೆಲುಗಿನಿಂದ ಭಾಷಾಂತರಿಸಿದ ಈ "**ಹೂ ಅರಳಿತು**" ಕಥಾಸಂಗ್ರಹವು ಆಂಧ್ರ, ಕರ್ನಾಟಕ ಐಕ್ಯಕ್ಕೆ ಪೀಠಿಕೆಯಾಗಿದೆ. ಮೂಲ ಕತೆಗಳ ಭಾವವು ಕೆಡದಂತೆ ಸುಂದರ ವಾಗಿ ಅನುವಾದಿಸುವುದರಲ್ಲಿ ಶ್ರೀ ವೆಂಕೋಬಾಚಾರ್ಯರು ಯಶಸ್ವಿ ಯಾಗಿದ್ದಾರೆ."

" ಕಲಿಯುಗ "

"........ಈ ಕಥಾಸಂಗ್ರಹದಲ್ಲಿಯ ಕತೆಗಳು ವೈವಿಧ್ಯ ಪೂರ್ಣವಾಗಿವೆ....**ಹಸಿವು, ಗೆದ್ದಲು, ಹೂ ಅರಳಿತು, ಆಶಾಜ್ಯೋತಿ, ಸಂಕ್ರಾಂತಿ ಹಬ್ಬ** ಮೊದಲಾವ ಕತೆಗಳು ಕಥಾವಸ್ತುವಿನ ದೃಷ್ಟಿಯಿಂದಲೂ, ನಿರೂಪಣೆಯ ದೃಷ್ಟಿಯಿಂದಲೂ ಉತ್ತಮವಾದ ಕತೆಗಳು........ ಶ್ರೀ ವೆಂಕೋಬಾಚಾರ್ಯರು, ಅನುವಾದ ಕಾರ್ಯದ ಅನುಭವದಿಂದ ಕನ್ನಡದಲ್ಲಿ ಉತ್ತಮ ಸಾಹಿತ್ಯರಚನೆಗೆ ಅಣಿಯಾಗಲೆಂದು ಬಯಸುತ್ತೇವೆ."

'ಕರ್ಮವೀರ'

"........**ಹೂ ಅರಳಿತು** ಎಂಬ ಪುಸ್ತಕದಲ್ಲಿ ಹೆಸರಾಂತ ತೆಲಗು ಕತೆಗಾರರಾದ ಚಲಂ, ಬಾಪಿರಾಜು, ನಾರ್ಲ, ವಿಶ್ವನಾಥ ಸತ್ಯನಾರಾಯಣ, ಮುನಿಮಾಣಿಕ್ಯಂ, ಇಲ್ಲಿಂದಲ ಮುಂತಾದವರ ೧೪ ಕತೆಗಳನ್ನು ಶ್ರೀ ವೆಂಕೋಬಾಚಾರ್ಯರು ಬಹಳ ಚೆನ್ನಾಗಿ ಅನುವಾದ ಮಾಡಿದ್ದಾರೆ. ಕೆಲವು ಕತೆಗಳಂತೂ ಅನುವಾದದಂತೆ ತೋರದೆ ಮೂಲ ಕತೆಗಳಂತಿವೆ. ಶ್ರೀಯುತರ ಸಾಹಸವು ಅಭಿನಂದನೀಯವಾದುದಾಗಿದೆ.

'ಪ್ರಜಾಮತ'



## ಶ್ರೀಮತಿ ಜಯಲಕ್ಷ್ಮಿ ಆರ್. ಶ್ರೀನಿವಾಸನ್

ಶ್ರೀಮತಿಯವರು ಮೈಸೂರು ಸರಕಾರದ ಮುಖ್ಯ ಸೆಕ್ರೆಟರಿಗಳಾದ ಶ್ರೀಯುತ ಕೆ. ಶ್ರೀನಿವಾಸನ್‌ರವರ ಧರ್ಮಪತ್ನಿ. ಅನೇಕ ವರುಷಗಳಿಂದ ಇವರು ತಮಿಳು ಮತ್ತು ಕನ್ನಡ ಕಥೆಕಾದಂಬರಿ ಪ್ರಪಂಚದಲ್ಲಿ ಹೆಸರು ಗಳಿಸಿರುವರಲ್ಲದೆ ಇವರ ಅನೇಕ ಕನ್ನಡ ಕಥಾಸಂಕಲನಗಳು ಈಗಾಗಲೇ ಹೊರಬಂದಿವೆ. "ಪ್ರತಿಫಲ" ಇವರ ಮೊದಲನೆಯ ಕಥಾಸಂಕಲನ. ಕನ್ನಡದಿಂದ ತಮಿಳಿಗೆ ಅನೇಕ ಕತೆಗಳನ್ನು ನೀಡಿರುವರು. ಶ್ರೀ ಅ. ನ. ಕೃ. ಇವರ "ಸಂಧ್ಯಾರಾಗ" ವನ್ನು ತಮಿಳಿಗೆ ಅನುವಾದಿಸುತ್ತಿರುವರಂತೆ. ಇದೀಗ ಹೊರಬಿದ್ದಿರುವ "ವಾತ್ಸಲ್ಯ" ಎಂಬ ಇವರ ಕಥಾಸಂಕಲನ ಜನರ ಮೆಚ್ಚುಗೆಯನ್ನು ಪಡೆದಿವೆ. "ಪರಿಣಯ" ವೆಂಬ ಕಾದಂಬರಿ ಬಿಡಿಬಿಡಿಯಾಗಿ "ತಾಯಿನಾಡು" ಪತ್ರಿಕೆಯಲ್ಲಿ ಪ್ರಕಟವಾಗಿದೆ. ಹೆಣ್ಣಿನ ಬಾಳನ್ನು ಚಿತ್ರಿಸುವ ಇವರ ಕತೆಗಳು ಜನರಿಗೆ ರುಚಿಸಿವೆ. ಕತೆಗಾರ್ತಿಯ ಹುಟ್ಟುಗುಣವು ಶ್ರೀಮತಿಯವರಲ್ಲಿ ಇರುವುದೆಂದು ಓರ್ವ ವಿಮರ್ಶಕರು ಸೂಚಿಸಿದ್ದಾರೆ. **ದೀಪಾವಳಿ, ಮೊಗ್ಗು, ಚಿನ್ನದ ಬಳೆ,** ಇವರ ಕಥಾ ಸಂಕಲನಗಳು. **ಸರೋಜ ನಳಿನಿ** ಎಂಬುದು ಜೀವನಚರಿತ್ರೆ (ಅನುವಾದಿತ).